ಏಷ್ಯಾದ ಸಹಪ್ರಕಟಣಾ ಕಾರ್ಯಕ್ರಮ

# ಏಷ್ಯಾದ ಆಯ್ದ ಕಥೆಗಳು

ಕಿರಿಯ ಓದುಗರಿಗೆ ಒಂದು ಸಂಗ್ರಹ

ಪ್ರಾಯೋಜನೆ

ಯುನೆಸ್ಕೋವಿನ ಏಷ್ಯಾ ಸಾಂಸ್ಕೃತಿಕ ಕೇಂದ್ರ

ಅನುವಾದ

ಎಸ್. ಕೆ. ರಮಾದೇವಮ್ಮ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ



ಇದು ಏಷ್ಯಾದ ಸಹ ಪ್ರಕಟಣಾ ಕಾರ್ಯಕ್ರಮದಡಿಯಲ್ಲಿ ಪ್ರಕಟಗೊಂಡ ಏಷ್ಯಾ ದೇಶಗಳ ಸಮಕಾಲೀನ ಕಥೆಗಳ ಸಂಕಲನ. ಯುನೆಸ್ಕೊವಿನ ಸಹಕಾರದೊಂದಿಗೆ ಏಷ್ಯಾದ ಯುನೆಸ್ಕೊ ಸದಸ್ಯ ರಾಷ್ಟ್ರಗಳ ಸಲಹೆಯಂತೆ ಐದು ದೇಶಗಳನ್ನೊಳಗೊಂಡ ಕೇಂದ್ರ ಸಂಪಾದಕ ಮಂಡಲಿ ಈ ಕಥೆಗಳನ್ನು ಆಯ್ಕೆಮಾಡಿದೆ.

ISBN 81-237-1196-4

ಮೊದಲ ಮುದ್ರಣ: 1995 (*ಶಕ 1916*)

ಎರಡನೆ ಮುದ್ರಣ: 1999 (*ಶಕ 1920*)



ಟೋಕಿಯೋ ಪುಸ್ತಕ ವಿಕಸನ ಕೇಂದ್ರ

6, ಫುಕುರೊ-ಮಾಚಿ, ಶಿಂಜುಕು-ಕು, ಟೋಕಿಯೊ-162

Stories From Asia Today *(Kannada)*

ರೂ. **20.00**

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,

ಎ-5. ಗ್ರೀನ್ ಪಾರ್ಕ್, ಹೊಸ ದೆಹಲಿ-110016,

ಇವರಿಂದ ಪ್ರಕಟಿತ.

# ಪರಿವಿಡಿ

ಆಫ್ಘಾನಿಸ್ತಾನ

# ಗಿಡುಗ ಮತ್ತು ಮರ

## ಅಹಜಮ್ ರಹ್ನಾವರ್ಡ್ ಜರ್ಯಾಬ್

ಬಹಳ ದೀರ್ಘ ಕಾಲಗಳಿಂದ ಒಂದು ಒಣಕಲು ಮರ ನಮ್ಮ ರಸ್ತೆಯಲ್ಲಿ ಇತ್ತು. ಹತ್ತಿರದಲ್ಲಿ ಒಬ್ಬ ಮೋಚಿಯ ಸಣ್ಣ ಅಂಗಡಿ ಇತ್ತು. ಅವನು ಪ್ರತಿನಿತ್ಯ ಮುಂಜಾನೆ ತನ್ನ ಅಂಗಡಿಯನ್ನು ತೆರೆಯುತಿದ್ದನು. ಪ್ರತಿದಿನ ಸೂರ್ಯ ಮುಳುಗುವ ಹೊತ್ತಿಗೆ ದೊಡ್ಡ ಬೀಗ ಹಾಕಿ ಅದನ್ನು ಮುಚ್ಚುತ್ತಿದ್ದನು. ನಮ್ಮ ರಸ್ತೆಯಲ್ಲಿ ಇಬ್ಬರು ಕೆಲಸವಿಲ್ಲದ ಮನುಷ್ಯರು ಇದ್ದರು. ಅವರಿಗೆ ಏಕೆ ಕೆಲಸವಿರಲಿಲ್ಲವೋ ನನಗೆ ಗೊತ್ತಿಲ್ಲ. ಆದರೆ, ಅವರು ಪ್ರತಿದಿನ ಮಾಡುತ್ತಿದ್ದ ಕೆಲಸ ಎಂದರೆ, ಆ ಮೋಚಿಯ ಅಂಗಡಿಯಲ್ಲಿ ಕುಳಿತು ವ್ಯರ್ಥವಾಗಿ ಕಾಲಹರಣ ಮಾಡುವುದಾಗಿತ್ತು. ಅವರು ಪ್ರಪಂಚಕ್ಕೆಲ್ಲಾ ಆ ಅಂಗಡಿಯ ವಸ್ತುಗಳಲ್ಲಿ ತಾವೂ ಒಂದು ಭಾಗವೋ ಎಂಬಂತೆ ಇದ್ದರು.



ಒಂದು ದಿನ ನಾನು ಆ ಅಂಗಡಿಯನ್ನು ಹಾದು ಹೋದಾಗ, ಆ ಮೋಚಿ ಎಂದಿನಂತೆ ಸಂತೋಷದಿಂದ ಪರಟುತ್ತಿರಲಿಲ್ಲವೆಂಬುದನ್ನು ಗಮನಿಸಿದೆ. ಅವನು ಆಳವಾದ ಯೋಚನೆಯಲ್ಲಿರುವಂತೆ ತಲೆ ಬಗ್ಗಿಸಿಕೊಂಡು ಕುಳಿತಿದ್ದನು. ಆ ಇಬ್ಬರು ಮೈಗಳ್ಳರೂ ಉದಾಸೀನರಾಗಿ ತಲೆ ಬಗ್ಗಿಸಿಕೊಂಡು ಯೋಚಿಸುತ್ತಾ ಕುಳಿತಿದ್ದರು. ಅವರುಗಳು ಮೋಚಿಯನ್ನು ಅನುಕರಿಸುತ್ತಿರಬಹುದೆಂದು ಕ್ಷಣ ಕಾಲ ಯೋಚಿಸಿದೆ. ಬಹುಶಃ ಅದು ಹಾಗೇ ಆಗಿತ್ತು- ಒಂದು ಭಾರೀ ಮಂಕು ಅನುಕರಣೆ.

ಏನೋ ಕೆಟ್ಟದು ನಡೆದಿರಬಹುದೆಂದು ಯೋಚಿಸಿ, ಅಂಗಡಿಗೆ ಹೋಗಿ ಮೋಚಿಯನ್ನು 'ಏನು ವಿಷಯ?' ಎಂದು ಕೇಳಿದೆ.

ನಿಧಾನವಾಗಿ ಮೋಚಿ ತಲೆ ಎತ್ತಿ ನನ್ನ ಕಡೆ ನೋಡಿದನು. ಸಾಧಾರಣವಾಗಿ ಅವನ ಕಣ್ಣುಗಳಲ್ಲಿ ಸಂತೋಷದ ಹೊಳಪು ಇರುತ್ತಿತ್ತು. ಆದರೆ, ಈಗ ನಾನು ಅವುಗಳಲ್ಲಿ ಏನೋ ಒಂದು ಮೂಕ, ಅಸ್ಪಷ್ಟ ನೋವನ್ನು ಮಾತ್ರ ಗಮನಿಸಿದೆ. ಆ ಇಬ್ಬರು ಮೈಗಳ್ಳರೂ ಕೂಡ ಭಾವಶೂನ್ಯ ಮುಖಗಳಿಂದ ನನ್ನ ಕಡೆ ನೋಡುತ್ತಿದ್ದರು.

'ನನ್ನ ಗಿಡುಗ ತಪ್ಪಿಸಿಕೊಂಡಿದೆ' ಎಂದ ಮೋಚಿ.

ಅವನ ಮಾತಿಗೆ ನನ್ನ ಹೃದಯ ಸಂತೋಷದಿಂದ ಹಿಗ್ಗಿತು. ಗಿಡುಗ ಮುಕ್ತವಾದದ್ದರಿಂದ ಹೆಚ್ಚಿನ ಸಂತೋಷ ಅನುಭವಿಸುತ್ತಾ, ಕೇಳಿದೆ,'ಹೇಗೆ ತಪ್ಪಿಸಿಕೊಂಡಿತು?'

ನಾನು ಸಂತೋಷಗೊಂಡುದನ್ನು ಮೋಚಿ ನೋಡಿರಬೇಕು. ಅವನು ಕೂಡಲೇ ಅದಕ್ಕೆ ಬೆಂಬಲ ಕೊಡುವಂತೆ ಜೋರಾಗಿ ನಕ್ಕನು. ಆ ಇಬ್ಬರು ಮೈಗಳ್ಳರೂ ಜಾಗ್ರತೆಯಾಗಿ ಜೊತೆಗೂಡಿದರು. ಮೋಚಿಯು ನಗುತ್ತಿದ್ದ ರೀತಿಯಲ್ಲಿ ಏನೋ ಒಂದು ವಿಧವಾದ ಸೇಡಿನ ಕೋಪ ಇತ್ತು.

'ಏಕೆಂದರೆ, ಅದಕ್ಕೇನೋ ಸಾಯುವ ಕಾಲ ಬಂದಿದೆ ಎಂದು ಕಾಣಿಸುತ್ತೆ' ಅವನು ಹೇಳಿದ.

"ಅದು ಏಕೆ ಸಾಯಬೇಕು?"-ನಾನು ಕೇಳಿದೆ.

"ಏಕೆಂದರೆ ಅದರ ಕಾಲಿಗೆ ಕಟ್ಟಿರುವ ಉದ್ದವಾದ ದಾರ ಇನ್ನೂ ಇದೆ" ಎಂದು ಅವನು ಹೇಳಿದ, ಮತ್ತೆ ಆ ಎಂದಿನ ಹೊಳಪು ಅವನ ಕಣ್ಣುಗಳಿಗೆ ಬಂತು.

"ಆ ಅನಿಷ್ಟ ಗಿಡುಗ ಮರದ ಮೇಲೆ ಕುಳಿತೊಡನೆ ಆ ದಾರ ಕೊಂಬೆಗಳಲ್ಲಿ ಸಿಕ್ಕಿಕೊಳ್ಳುತ್ತದೆ. ಆ ಪಕ್ಷಿ ಸಾಯುವವರೆಗೂ ಅಲ್ಲೇ ನೇತಾಡುತ್ತಿರುತ್ತದೆ." ಮತ್ತೆ ಅವನು ಜೋರಾಗಿ ನಕ್ಕು ಮುಂದೆ ಹೇಳಿದನು, "ಅದು ನಿಜವಾಗಿಯೂ ಗಟ್ಟಿಯಾದ ದಾರ ಯಾವ ಪಕ್ಷಿಗೂ ಕೀಳಲು ಆಗುವುದಿಲ್ಲ."

ನನ್ನ ಹೃದಯದಲ್ಲಿನ ಸಂತೋಷ ನಂದಿಹೋಯಿತು. ಮತ್ತು ಮನಸ್ಸು



ಭಯದಿಂದ ತುಂಬಿಕೊಂಡಿತು. ಇಬ್ಬರು ಮೈಗಳ್ಳರು ಮೋಚಿಯ ಮಾತುಗಳನ್ನೇ ಹೇಳುತ್ತಲಿದ್ದರು, "ಯಾವ ಪಕ್ಷಿಗೂ ಕೀಳಲು ಆಗುವುದಿಲ್ಲ, ಯಾವ ಪಕ್ಷಿಗೂ ಕೀಳಲು ಆಗುವುದಿಲ್ಲ." ಎಂದು.

'ಗಿಡುಗ ತನ್ನ ಸಾವನ್ನೂ ತನ್ನೊಡನೆಯೇ ಹೊತ್ತುಕೊಂಡು ಹೋಗಿದೆ'– ಮೋಚಿ ಹೇಳಿದ.

'ನೀನು ತುಂಬಾ ಕ್ರೂರಿ' – ನಾನು ಹೇಳಿದೆ.

ಅವನ ಕಣ್ಣುಗಳಲ್ಲಿ ಅದೇ ಹೊಳಪಿತ್ತು.

'ನಾನು ಅದಕ್ಕೆ ಜೀವಂತ ಗುಬ್ಬಚ್ಚಿಗಳನ್ನು ಆಹಾರವಾಗಿ ಹಾಕುತ್ತಿದ್ದೆ. ಅದು ಅವುಗಳನ್ನು ಕೊಂದು ಸಂತೋಷವಾಗಿ ತಿನ್ನುತ್ತಿತ್ತು. ಆದರೆ, ಹಾರಿ ಹೋಗಿದೆ. ನಾನು......'

ನಾನು ಇನ್ನು ಹೆಚ್ಚಾಗಿ ಕೇಳಲು ನಿಲ್ಲಲಿಲ್ಲ. ನನ್ನ ದಾರಿ ನಾನು ಓಡಿದೆ. ಅವನ ಮಾತುಗಳು ನನ್ನ ಕಿವಿಗಳಲ್ಲಿ ಪ್ರತಿಧ್ವನಿಸುತ್ತಾ ಇದ್ದುವು. 'ಅದರ ಕಾಲಿನಲ್ಲಿ ಉದ್ದವಾದ ದಾರ ಇನ್ನೂ ಇರುವುದರಿಂದ, ಅದು ಸಿಕ್ಕಿ ಹಾಕಿಕೊಂಡು, ಸಾಯುವವರೆಗೂ ನೇತಾಡುತ್ತಿರುತ್ತದೆ. ಅದು ತುಂಬಾ ಗಟ್ಟಿ ದಾರ. ಗಿಡುಗಕ್ಕೆ ಅದನ್ನು ಕೀಳಲಾಗುವುದಿಲ್ಲ......'



ನನಗೆ ಅದೊಂದು ಕೆಟ್ಟ ರಾತ್ರಿಯಾಗಿತ್ತು. ನಿದ್ರೆ ಮಾಡಲಾಗಲಿಲ್ಲ. ಕಗ್ಗತ್ತಲೆ ನನ್ನನ್ನು ಹೆದರಿಸಿತ್ತು. ಕಿಟಕಿಯಿಂದ ಹೊರಗೆ ನೋಡಿದಾಗ ಇಡೀ ರಸ್ತೆ ಕತ್ತಲಲ್ಲಿ ನಿದ್ರಿಸುತ್ತಿರುವಂತೆ ಕಂಡಿತು. ನಾನು ಮತ್ತೆ ನಿದ್ರೆ ಮಾಡಲು ಪ್ರಯತ್ನಿಸಿದೆ. ಆದರೆ, ನನ್ನ ಮನದಲ್ಲಿ ಯಾವುದೋ ವಿಚಾರ ರೂಪುಗೊಳ್ಳುತ್ತಿತ್ತು. ನಾನು ಅದನ್ನು ನನ್ನ ಜಾಗೃತಾವಸ್ಥೆಗೆ ಎಳೆದು ತರಲು ಪ್ರಯತ್ನಿಸಿದೆ. ಆದರೆ, ಎಷ್ಟೇ ಪ್ರಯತ್ನಿಸಿದಾಗ್ಯೂ ಅದು ಸ್ಪಷ್ಟವಾಗಲೇ ಇಲ್ಲ. ಯಾವುದೋ ಶಕ್ತಿ ಆ ವಿಚಾರವನ್ನು ಮುಚ್ಚಿಟ್ಟು, ಒಂದಕ್ಕೆ ಹಿಡಿದುಕೊಂಡಿತ್ತು. ಆ ವಿಚಾರ ತಾನೇ ಹೊರಗೆ ಬರಲು ಒದ್ದಾಡಿತು. ರಾತ್ರಿ ನಾನು ಎಂಥದೋ ಒಳ ಜ್ವರದಿಂದ ಬೆಂಕಿಯಾಗಿದ್ದೆ.

ಸರಿಯಾದ ಕಾಲಕ್ಕೆ ಕತ್ತಲು ಮಾಯವಾಗುತ್ತಾ ಬಂತು. ನಿದ್ರೆ ಮತ್ತು ಎಚ್ಚರಿಕೆಯ ಮಧ್ಯದ ಯಾವುದೋ ಒಂದು ಸ್ಥಿತಿಯಲ್ಲಿ ಪ್ರಪಂಚ ಹುರಿ ಮತ್ತು ದಾರಗಳಿಂದ ತುಂಬಿರುವುದನ್ನು ನಾನು ನೋಡಲಾರಂಭಿಸಿದೆ. ಉದ್ದವಾದ ದಾರಗಳು ಮತ್ತು ಚಿಕ್ಕ ದಾರಗಳು ನಮ್ಮ ಬೀದಿಯೂ ಕೂಡಾ ದಾರಗಳಿಂದ ತುಂಬಿತ್ತು. ದಪ್ಪವಾದ ದಾರಗಳು ಮತ್ತು ಸಣ್ಣನೆಯ ದಾರಗಳು. ಆದರೆ ಕೂಡಲೇ ನಾನು ಪ್ರತಿ ದಾರವೂ ಯಾರದೋ ಪಾದಕ್ಕೆ ಕಟ್ಟಿರುವುದನ್ನು ನೋಡಿದೆ. ಪ್ರತಿಯೊಬ್ಬ ಮನುಷ್ಯನ ಪಾದಕ್ಕೆ ದಾರ ಕಟ್ಟಲಾಗಿತ್ತು. ನನ್ನ ಪಾದದಲ್ಲೂ ಒಂದು ದಾರ ಇತ್ತು.

ನಾನು ನಡುಗುತ್ತಾ ಎದ್ದೆ. ಆಗ ಬೆಳಗಾಗಿತ್ತು. ರಸ್ತೆಯಿಂದ ಜೋರಾಗಿ ಗದ್ದಲ ಕೇಳಿಸಿತು. ಹೊರಗೆ ಹೋದೆ, ಆ ಮೋಚಿಯ ಅಂಗಡಿಯ ಹತ್ತಿರದ ಒಣಕಲು ಮರದ ಕೆಳಗೆ ಜನ ಗುಂಪು ಸೇರಿರುವುದನ್ನು ನೋಡಿದೆ. ಆ ಮೋಚಿ ಕೂಡಾ

ಅಲ್ಲಿ ಕುಣಿಯುತ್ತಾ, ಕೂಗುತ್ತಾ ಇದ್ದನು. ಅವನು ನನ್ನನ್ನು ನೋಡುತ್ತಲೇ ನನ್ನ ಬಳಿಗೆ ಕುಣಿಯುತ್ತಾ ಬಂದು ಕೂಗಿ ಹೇಳಿದ - 'ನೋಡು, ನಾನು ಸರಿಯಾಗಿಯೇ ಹೇಳಿದ್ದೆ.

'ಅಂದರೆ?'- ನಾನು ಕೇಳಿದೆ.

'ಬಾ, ನನ್ನ ಜೊತೆ ಬಾ'- ಎನ್ನುತ್ತಾ ಅವನು ನನ್ನ ಕೈಯನ್ನು ಹಿಡಿದುಕೊಂಡು ಆ ಒಣಕಲು ಮರದ ಹತ್ತಿರ ಎಳೆದುಕೊಂಡು ಹೋಗಿ ಒಂದು ರೆಂಬೆ ಕಡೆ ತೋರಿಸುತ್ತಾ ' ನೋಡು, ಅಲ್ಲಿ ನೋಡು' ಎಂದ.



ಆ ಗಿಡುಗ ಕೊಂಬೆಗಳಲ್ಲೊಂದರಿಂದ ನೇತಾಡುತ್ತಿತ್ತು. ಅದರ ಪಾದದಲ್ಲಿದ್ದ ದಾರ ಬಿಗಿಯಾಗಿ ಮರದಲ್ಲಿ ಸಿಕ್ಕಿಕೊಂಡಿತ್ತು. ಅದರ ಸಾವಿನ ತೊಳಲಾಟದಲ್ಲಿ ಆ ಪಕ್ಷಿಯ ಪುಕ್ಕಗಳು ಉದುರಿ ಎಲ್ಲಾ ಕಡೆ ಹರಡಿ ಬಿದ್ದಿದ್ದುವು. ಪಕ್ಷಿ ಸತ್ತಿತ್ತು. ಅದು ತಲೆ ಕೆಳಗಾಗಿ ತೂಗುತ್ತಿತ್ತು. ನಿರ್ಜೀವ ಕಣ್ಣುಗಳಿಂದ ನೆಟ್ಟ ದೃಷ್ಟಿಯಲ್ಲಿ ನೋಡುತ್ತಿತ್ತು. ನೋವಿನಿಂದ 'ಇದು ರಸ್ತೆಯ ಕೊನೆ', ಎಂದು ಹೇಳುತ್ತಿರುವಂತೆ ಅನ್ನಿಸಿತು.

'ನೋಡು', ಮೋಚಿ ಹೇಳಿದ, 'ಅದು ಬೇಗ ಸಾಯುವುದೆಂದು ನಾನು ಹೇಳಲಿಲ್ಲವೇ?'

ಜನರ ಗುಂಪು, ಆ ಸತ್ತ ಪಕ್ಷಿಯ ಕಡೆ ತೋರಿಸುತ್ತಾ, ಕೂಗಾಡಿತ್ತು. ಅವರ ಕಣ್ಣುಗಳು ಒಂದು ಹುಚ್ಚು ಸಂತೋಷ, ತೃಪ್ತಿಯಿಂದ ಹೊಳೆಯುತ್ತಿರುವಂತೆ ಕಂಡವು. 'ಹಾಗೆ ನೇತಾಡುತ್ತಿರುವುದು ಪಕ್ಷಿಯಾದದ್ದು ಎಷ್ಟು ಚೆನ್ನಾಯಿತು, ಸಧ್ಯ ನಾವಲ್ಲವಲ್ಲಾ', ಎಂದುಕೊಂಡು ಅವರು ಸಂಭ್ರಮಪಡುತ್ತಿರುವರೆಂದು ನಾನು ಯೋಚಿಸಿದೆ.

ಮನುಷ್ಯರ ಪಾದಗಳ ಕಡೆ ನೋಡಿದೆ, ಎಲ್ಲರ ಪಾದಗಳೂ ಕಟ್ಟಲ್ಪಟ್ಟಿದ್ದುವು. ಆ ಮೋಚಿಯ ಪಾದಗಳು ಕೂಡಾ ಕಟ್ಟಲ್ಪಟ್ಟಿದ್ದುವು. ಆ ದಾರಗಳು ಗೀರುಕುಣಿಕೆಯಂತಿದ್ದವು. ಪ್ರತಿ ಕುಣಿಕೆಯೂ ಗುಂಡುಗುಂಡಗೆ ಸ್ವಾರ್ಥದ ಉಂಡೆಗಳಂತಿದ್ದುವು.

ನಾನು ಜೋರಾಗಿ ನಕ್ಕುಬಿಟ್ಟೆ. 'ನೀನು ಹೀಗೇಕೆ ನಗುತ್ತಿರುವೆ?' ಎಂದು ಅವರುಗಳು ಕೇಳಿದರು. ಅವರುಗಳಿಗೆ ಉತ್ತರ ಕೊಡುವ ಬದಲು ಇಡೀ ರಸ್ತೆ ಪ್ರತಿಧ್ವನಿಸುವಂತೆ ಜೋರು ಜೋರಾಗಿ ನಕ್ಕೆ. 'ನೀನೇಕೆ ನಗುತ್ತಿರುವೆ?' ಎಂದು ಮೋಚಿ ಜೋರಾದ ಹಾಗೂ ಭಾರವಾದ ಧ್ವನಿಯಲ್ಲಿ ಕಿರುಚಿದನು.

'ನೀವೆಲ್ಲರೂ- ನಿಮ್ಮೆಲ್ಲರ ಪಾದಗಳೂ ದಾರಗಳಿಂದ ಕಟ್ಟಲ್ಪಟ್ಟಿವೆ' ಎಂದು ಉತ್ತರ ಕೊಟ್ಟೆ.

ಎಲ್ಲರೂ, ಭಯದಿಂದ ತಮ್ಮ ಪಾದಗಳನ್ನು ನೋಡಿಕೊಂಡು 'ಎಲ್ಲಿ? ಎಂತಹ ದಾರಗಳು?' ಎಂದರು.

ಆದರೆ, ನಾನು ಉತ್ತರ ಕೊಡಲಿಲ್ಲ. ನನ್ನ ಸ್ವಂತ ಪಾದಗಳನ್ನೇ ನೋಡಿಕೊಳ್ಳುತ್ತಿದ್ದೆ, "ನಾನು" ಎಂಬ ಅಹಂನಿಂದ ಮಾಡಿದ ಚಿಕ್ಕ ಕೊಂಡಿಗಳಿಂದ ಮಾಡಿದ ದಾರದಿಂದ ನಾನು ಕಟ್ಟಲ್ಪಟ್ಟಿದ್ದೆ.

ಆಗ, ಯಾವ ವಿಚಾರ ನನ್ನ ಸುಪ್ತ ಪ್ರಜ್ಞೆಯಲ್ಲಿ ಮೂಡಿ ಬಂದಿತ್ತೋ ಅದು ಕೊನೆಗೆ ಬಹಿರಂಗವಾಗಿ ಬಂದು ಕಾಣಿಸಿಕೊಂಡಿತು. ಕೂಡಲೇ ಇಡೀ ಪ್ರಪಂಚ ಹಾಸ್ಯಾಸ್ಪದವಾಗಿ ಕಂಡಿತು. ನಾನು ಮತ್ತೆ ಜೋರಾಗಿ ನಗಲಾರಂಭಿಸಿದೆನು.

ಆಗ, ನಾವು ಪ್ರತಿಯೊಬ್ಬರೂ ಒಂಟಿ ಕಾಲು ಸಿಲುಕಿಸಿಕೊಂಡು ಆ ಒಣಕಲು

ಮರದ ಕೊಂಬೆಗಳಿಂದ ತೂಗಾಡುತ್ತಿದ್ದವು. ಆ ಮೋಚಿ ನನ್ನ ಪಕ್ಕದಲ್ಲಿ ನೇತಾಡುತ್ತಿದ್ದ. ಅವನ ಆ ದುಃಖಿತ ಮುಖ ನನ್ನ ಮುಖದ ಬಳಿ ಇತ್ತು. ಆ ಮುಖ 'ಇದು ರಸ್ತೆಯ ಕೊನೆ' ಎಂದು ಹೇಳುತ್ತಿರುವಂತೆ ಕಾಣಿಸಿತು. ಆ ಇಬ್ಬರು ಮೈಗಳ್ಳರೂ ಹತ್ತಿರದಲ್ಲೇ ತೂಗಾಡುತ್ತಿದ್ದರು. ಅವರ ಮುಖಗಳು ಅದೇ ದುಃಖದಿಂದ ಅದೇ ಮಂಕು ಅನುಕರಣೆಯಿಂದ ತುಂಬಿದ್ದುವು.

ಬೇರೆ ಒಂದು ಕೊಂಬೆಯಿಂದ ಗಿಡುಗ ನೇತಾಡುತ್ತಿದ್ದುದನ್ನು ನಾನು ನೋಡಿದೆ. 'ಅದು ಏಕೆ ವಾಪಸು ಬಂತು' ಎಂದು ನನ್ನನ್ನು ನಾನೇ ಕೇಳಿಕೊಂಡೆ, ಆಗ ಅದರ ಪಾದಗಳಲ್ಲಿ ಇನ್ನೊಂದು ಕುಣಿಕೆ ಇರುವುದನ್ನು ನೋಡಿದೆ. ಆ ಕುಣಿಕೆ ಮೋಚಿಯ ಅಂಗಡಿಯ ದಾರಿಯ ವರೆಗೂ ಎಳೆಯಲ್ಪಟ್ಟಿತು ಮತ್ತು ಆ ದಾರ ಜೀವಂತ ಗುಬ್ಬಚ್ಚಿಗಳಿಂದ ಮಾಡಿದಾಗಿತ್ತು.

ಚಿತ್ರಗಳು: ಪಶೀಮ್ ಘೋರ್‌ಬಂಡಿ

ಬರ್ಮಾ

# ಸುಂದರ ನೀರುಹಕ್ಕಿ

ಗಯೇತ್ನಿ

*(ಸಂಪಾದಕರ ಟಿಪ್ಪಣಿ: ಈ ಕಥೆಯನ್ನು ಈ ಅನುವಾದದಲ್ಲಿ ಸ್ವತಂತ್ರವಾಗಿ ಅಳವಡಿಸಿಕೊಳ್ಳಲಾಗಿದೆ. ಈ ಲೇಖಕರ " ಮಾಡ್ರನ್ ಶಾರ್ಟ್ ಸ್ಟೋರೀಸ್ ಫಾರ್ ಯಂಗ್ ಪೀಪಲ್" ಎಂಬ ಪುಸ್ತಕದಲ್ಲಿ ಇದು ಮೂಲರೂಪದಲ್ಲಿ ಪ್ರಕಟವಾಗಿತ್ತು. ಈ ಪುಸ್ತಕಕ್ಕಾಗಿ ಲೇಖಕರಿಗೆ 1964ರ ರಾಷ್ಟ್ರೀಯ ಸಾಹಿತ್ಯ ಪುರಸ್ಕಾರಗಳಲ್ಲಿ ಪ್ರಥಮ ಬಹುಮಾನ ದೊರೆತಿತ್ತು.*

*ಈ ಕಥೆಯ ಕೊನೆಯಲ್ಲಿ ಉಲ್ಲೇಖಿಸಿರುವ ಕಳ್ಳ ನಟೆಟ್ಪ್ಯಾ(Ngatetpya) ಬರ್ಮಾದ ಸಾಹಿತ್ಯದಲ್ಲಿ ಒಂದು ವಿಶಿಷ್ಟ ಪಾತ್ರ. ಈತ ಕೂಡ ಬಡವರಿಗೆ ಕೊಡಲು ಶ್ರೀಮಂತರಿಂದ ಕದಿಯುತ್ತಿದ್ದ ರಾಬಿನ್ ಹುಡ್‌ನಂತೆ (Robin Hood)ಇದ್ದನು.)*



ಅದು ಮಳೆಗಾಲವಾಗಿತ್ತು. ಸಣ್ಣಗೆ ಮಳೆ ಬೀಳುತ್ತಿತ್ತು. ನಾನು ನನ್ನ ಸ್ನೇಹಿತನೊಂದಿಗೆ ದೊಡ್ಡದೊಂದು ಮರದ ಕೆಳಗೆ ಕುಳಿತಿದ್ದೆ. ನಾವಿಬ್ಬರೂ ಮಣ್ಣಿನಲ್ಲಿ ಗೊಂಬೆಗಳನ್ನು ಮಾಡುತ್ತಿದ್ದೆವು. ಗೊಂಬೆ ಮಾಡಲು ಮಣ್ಣನ್ನು ಗೆದ್ದಲು ಹುಳು ನಿರ್ಮಿಸಿದ ಹುತ್ತದಿಂದ ತೆಗೆದುಕೊಂಡಿದ್ದೆವು. ಇದು ತುಂಬಾ ನಯವಾಗಿ, ಚೆನ್ನಾಗಿತ್ತು. ಮರಳು ಮಣ್ಣಿನಂತೆ ಅರಳಾಗಿರಲಿಲ್ಲ, ಒಡೆದುಹೋಗುತ್ತಿರಲಿಲ್ಲ. ಈ ಮಣ್ಣಿನಿಂದ ನಾವು ಆಗ ಸಣ್ಣ ಸಣ್ಣ ಹಸುಗಳನ್ನು ಮಾಡುತ್ತಿದ್ದೆವು.

ಅಷ್ಟು ಹೊತ್ತಿಗೆ ಅಲ್ಲಿಗೆ ಇಬ್ಬರು ದೊಡ್ಡ ಹುಡುಗರು ಬಂದರು. ಒಬ್ಬನು ತುಂಬಾ ದಪ್ಪಗಿದ್ದ. ಆದ್ದರಿಂದ ಅವನಿಗೆ 'ಕ್ವೀಗಿ' ಎಂದರೆ 'ದೊಡ್ಡ ಎಮ್ಮೆ' ಎಂಬರ್ಥದ ಅಡ್ಡ ಹೆಸರು ಇತ್ತು. ಅವನು ತನ್ನ ಅಂಗಿಯೊಳಗೆ ಬದುಕಿದ ನೀರುಹಕ್ಕಿಗಳನ್ನು ಹೊತ್ತು ತರುತ್ತಿದ್ದನು.

ನನ್ನ ಸ್ನೇಹಿತ 'ಕ್ವೀಗಿ' ಯನ್ನು ಕೇಳಿದ–'ನೀರು ಹಕ್ಕಿ ಎಲ್ಲಿ ಸಿಕ್ಕಿತು? ಕವಣೆಯಿಂದ ಅದನ್ನು ಹೊಡೆದೆಯೇನು?'

'ಹೌದು, ನಾನು ಆ ಕೊಳದ ಬಳಿ ಹೊಡೆದು ಬೀಳಿಸಿದೆ', ಕ್ವೀಗಿ ಹೇಳಿದನು. 'ಮತ್ತೆ ನಾನೂ ಒಂದಕ್ಕೆ ಹೊಡೆದೆ. ಆದರೆ, ಅದು ಹೊರಟು ಹೋಯಿತು', ಎಂದು ಇನ್ನೊಬ್ಬ ಹುಡುಗ ಹೇಳಿದ.

'ಅದನ್ನು ಹೊರಗೆ ತೆಗೆ, ನನಗೂ ಅದನ್ನು ನೋಡಲು ಬಿಡು', ಎಂದು ನಾನು ಕ್ವೀಗಿಗೆ ಹೇಳಿದೆ.



ಕ್ವೀಗಿ ಗಮನಕೊಡದವನಂತೆ ನಟಿಸಿದನು. ಆದರೆ, ಅವನು ಕೊನೆಗೆ ಆ ಪಕ್ಷಿಯನ್ನು ತನ್ನ ಅಂಗಿಯಿಂದ ಹೊರಗೆ ತೆಗೆದನು. ಅವರು ಅದು ತಪ್ಪಿಸಿಕೊಂಡು ಹೋಗದಂತೆ ಅದನ್ನು ಒಂದು ಬಳ್ಳಿಯಿಂದ ಕಟ್ಟಿದ್ದರು. ನಾನು ಆ ಪಕ್ಷಿಯನ್ನು ನನ್ನ ಕೈಯ್ಯಲ್ಲಿ ಹಿಡಿದುಕೊಂಡೆ. ನನಗೆ ಅದು ತುಂಬಾ ಇಷ್ಟವಾಯಿತು. ಅದರ ಸುಂದರ ಪುಕ್ಕಗಳು ಹಾಲಿನಂತೆ ಬೆಳ್ಳಗಿದ್ದುವು. ಅದರ ಕೊಕ್ಕು ಹಾಗೂ ಕಾಲುಗಳು ಸುಂದರವಾಗಿದ್ದವು. ಇಂತಹ ನೀರುಹಕ್ಕಿಯನ್ನು ಸಾಕುಪ್ರಾಣಿಯಂತೆ ಇಟ್ಟುಕೊಂಡರೆ ಎಷ್ಟು ಚೆನ್ನಾಗಿರುತ್ತದೆ, ಎಂದು ಯೋಚಿಸಿದೆ. ನನಗೆ ಮುದ್ದಿಗಾಗಿ ಪ್ರಾಣಿಗಳನ್ನು ಸಾಕಲು ಇಷ್ಟ. ಮತ್ತೆ ಆ ಸಮಯದಲ್ಲಿ ನನ್ನ ಬಳಿ ಒಂದು ನಾಯಿ, ಒಂದು ಬೆಕ್ಕು, ಒಂದು ದೊಡ್ಡ ಕೋಳಿ ಇತ್ತು. ಆಗತಾನೆ ಕೋಳಿ ಹದಿನಾಲ್ಕು ಮೊಟ್ಟೆಗಳ ಮೇಲೆ ಕಾವ ಕುಳಿತಿತ್ತು. ಮೊಟ್ಟೆಗಳು ಮರಿಗಳಾದಾಗ ಅನೇಕ ಚಿಕ್ಕ ಕೋಳಿಪಿಳ್ಳೆಗಳು ಬರುವುದನ್ನು ನಿರೀಕ್ಷಿಸುತ್ತಿದ್ದೆ. ಆದರೆ, ಈಗ ಇದ್ದಕ್ಕಿದ್ದಂತೆ ಕ್ವೀಗಿ ಬಳಿ ಇರುವ ಸೊಗಸಾದ ನೀರುಹಕ್ಕಿಯನ್ನು ಪಡೆಯುವುದನ್ನು ಬಿಟ್ಟು ಬೇರೆ ಯಾವುದರ ಬಗ್ಗೆಯೂ ನಾನು ಯೋಚಿಸಲಾರದೆ ಹೋದೆ.

ನನ್ನ ಮುಖ ನೋಡಿ ನಾನು ಏನು ಯೋಚಿಸುತ್ತಿದ್ದೇನೆ ಎಂಬುದನ್ನು ಕ್ವೀಗಿ ತಿಳಿದುಕೊಳ್ಳಬಲ್ಲವನಾಗಿದ್ದ. ಅವನು 'ನೀನಿದನ್ನು ಸಾಕಲು ಇಷ್ಟಪಡುತ್ತೀಯಾ'? ಎಂದ.

'ಖಂಡಿತ' ಎಂದು ಬೇಗನೆ ಉತ್ತರಿಸಿದೆ. 'ನೀನಿದನ್ನು ನನಗೆ ಕೊಡುತ್ತೀಯಾ?' 'ಖಂಡಿತ ನೀನು ತೆಗೆದುಕೊಳ್ಳಬಹುದು. ಆದರೆ, ಅದಕ್ಕೆ ಬದಲಾಗಿ ನೀನು ನನಗೆ ಹತ್ತು ಸಿಗರೇಟುಗಳನ್ನು ಕೊಡಬೇಕು' ನನ್ನ ಗುಂಪಿನಲ್ಲಿ ಯಾವ ಹುಡುಗರೂ ಧೂಮಪಾನ ಮಾಡುತ್ತಿರಲಿಲ್ಲ. ಆದರೆ ಕ್ವೀಗಿ ಮತ್ತು ಅವನ ಸ್ನೇಹಿತ ಗುಟ್ಟಾಗಿ ಧೂಮಪಾನ ಮಾಡಲು ಪ್ರಾರಂಭಿಸಿದ್ದರು.

'ಓ ನನಗೆ ಆ ನೀರುಹಕ್ಕಿ ತುಂಬಾ ಇಷ್ಟ. ಆದರೆ, ನನ್ನಲ್ಲಿ ಸಿಗರೆಟ್ ಇಲ್ಲ' ನಾನು ಹೇಳಿದೆ.

'ಆದರೆ, ನಿನ್ನ ಚಿಕ್ಕಮ್ಮ– ನಿನ್ನ ಮನೆಯಲ್ಲಿರುವವರು.– ಅವರ ಬಳಿ ಇಲ್ಲವೇ? ತೆಗೆದುಕೊಂಡು ಬಾ'.

'ಓ, ಅವಳು ನನಗೆ ಏನನ್ನೂ ಕೊಡುವುದಿಲ್ಲ, ಮತ್ತೆ ಅವಳನ್ನು ಕೇಳದೆ ತೆಗೆದುಕೊಳ್ಳಲು ನನಗೆ ಧೈರ್ಯವಿಲ್ಲ. ನಾನು ಹಾಗೆ ಮಾಡಲಾರೆ. ಅದರ ಬದಲು ನಾನು ನಿನಗೆ ಸ್ವಲ್ಪ ಹಣ ಕೊಡುತ್ತೇನೆ.'

'ಇಲ್ಲ, ಹಣ ನನಗೆ ಏನೂ ಪ್ರಯೋಜನಕ್ಕೆ ಬರುವುದಿಲ್ಲ ನಮಗೆ ಬೇಕಾದ್ದು ಸಿಗರೇಟ್. ನೀನು ಸಿಗರೇಟ್ ತರದಿದ್ದಲ್ಲಿ ನಾವು ಬೇರೆ ಯಾರನ್ನಾದರೂ ನೋಡುವೆವು'.

ಅವನ ಮಾತುಗಳಿಂದ ನಾನು ತುಂಬಾ ನಿರಾಶೆಗೊಂಡೆ. ನನ್ನ ಚಿಕ್ಕಮ್ಮನ



ಕೆಲವು ಸಿಗರೇಟುಗಳನ್ನು ಕದಿಯಲು ನನಗೆ ಧೈರ್ಯವಿದೆಯೇ? ಇಲ್ಲ, ಅದು ಸರಿಯಾಗುವುದಿಲ್ಲ. ಮತ್ತೆ ನಿಜವಾಗಿಯೂ ನನಗೆ ಹೊಡೆತಗಳು ಬೀಳುತ್ತವೆ.

'ಸರಿ, ಹೊರಡೋಣವೇ', ಎಂದು ಇನ್ನೊಬ್ಬ ಹುಡುಗ ಹೇಳಿದ. ಕ್ವೀಗಿ ನನ್ನ ಕೈಗಳಿಂದ ನೀರುಹಕ್ಕಿಯನ್ನು ತೆಗೆದುಕೊಂಡನು. ಇಬ್ಬರೂ ಹೊರಟರು. ನನ್ನನ್ನು ಬಿಡಲು ಇಷ್ಟವಿಲ್ಲವೋ ಎಂಬಂತೆ ಆ ಪಕ್ಷಿ ರೆಕ್ಕೆಗಳನ್ನು ಜೋರಾಗಿ ಬಡಿಯಲಾರಂಭಿಸಿತು. ನನ್ನ ಹೃದಯ ಜೋರಾಗಿ ಹೊಡೆದುಕೊಳ್ಳುತ್ತಿತ್ತು."ಈ ಸುಂದರ ನೀರುಹಕ್ಕಿ ನನಗೆ ಬೇಕೇಬೇಕು" ಎಂದು ಯೋಚಿಸುತ್ತಿದ್ದೆ.

'ಈಗ ನಾನೇನು ಮಾಡಲಿ?' ಎಂದು ಸ್ನೇಹಿತನನ್ನು ಕೇಳಿದೆ. ಆದರೆ ಅವನು ತನ್ನ ತಲೆಯನ್ನು ಮಾತ್ರ ಅಲ್ಲಾಡಿಸಿದನು. ನನ್ನ ಸ್ವಂತ ನಿರ್ಧಾರ ತೆಗೆದುಕೊಳ್ಳಬೇಕೆಂದು ಅವನು ಹೇಳಿದನು.

ಕ್ವೀಗಿ ಮತ್ತು ಅವನ ಸ್ನೇಹಿತ ಆ ನೀರುಹಕ್ಕಿಯನ್ನು ತಮ್ಮೊಡನೆ ತೆಗೆದುಕೊಂಡು ಹೊರಟು ಹೋಗುತ್ತಿದ್ದರು. ಅದು ತನ್ನ ರೆಕ್ಕೆಗಳನ್ನು ಇನ್ನೂ ಬಡಿಯುತ್ತಲೇ ಇತ್ತು. ಅದು ನನ್ನನ್ನು ಕರೆಯುತ್ತಿರುವಂತೆ ಅನ್ನಿಸಿತು.

ನನಗೆ ಹೆಚ್ಚು ತಡೆದುಕೊಳ್ಳಲಾಗಲಿಲ್ಲ.

'ಒಳ್ಳೆಯದು' ನಾನು ಕೂಗಿದೆ, ಇದು ಒಂದು ವ್ಯಾಪಾರ ಎಂದುಕೊಂಡು, 'ನೀರು ಹಕ್ಕಿಯನ್ನು ವಾಪಸು ತೆಗೆದುಕೊಂಡು ಬಾ. ಮತ್ತೆ ನಾನು ಸಿಗರೇಟು ತಂದು ಕೊಡುತ್ತೇನೆ'.

ಮನೆಗೆ ಓಡುತ್ತಾ ಹೋಗಿ, ಸೀದಾ ಮಹಡಿಯ ಮೇಲಿರುವ ನನ್ನ ಚಿಕ್ಕಮ್ಮನ ಪುಸ್ತಕದ ಬೀರು ಕಡೆ ಹೋದೆ. ಮಣ್ಣಾದ ಕೈಗಳಿಂದ ಸಿಗರೇಟ್ ಡಬ್ಬನ್ನು ತೆಗೆದೆ. ಅದರಿಂದ ಸರಿಯಾಗಿ ಹತ್ತು ಸಿಗರೇಟ್‌ಗಳನ್ನು ಎಣಿಸಿ ತೆಗೆದೆ. ಇದರಿಂದ ಡಬ್ಬಿ ಹೆಚ್ಚು ಕಡಿಮೆ ಖಾಲಿಯಾಗಿತ್ತು. ನಂತರ, ನಾನು ಎಚ್ಚರಿಕೆಯಿಂದ ಆ



ಡಬ್ಬವನ್ನು ಅದರ ಸ್ಥಳದಲ್ಲೇ ಇಟ್ಟು ಆ ಹುಡುಗರು ಕಾಯುತ್ತಿದ್ದ ಜಾಗಕ್ಕೆ ಓಡಿ ಹೋದೆ.

'ಇಗೋ', ನಾನು ಕ್ವೀಗಿಗೆ ಹೇಳಿದೆ– 'ಇಲ್ಲಿ ಹತ್ತು ಸಿಗರೇಟ್‌ಗಳಿವೆ.' ಆ ನೀರುಪಕ್ಕಿಯನ್ನು ನನ್ನ ಕೈಗೆ ಕೊಟ್ಟನು. ನಾನು ಪ್ರಪಂಚದಲ್ಲಿ ಅತ್ಯಂತ ಸುಂದರವಾದ ನೀರುಪಕ್ಕಿಯ ಹೆಮ್ಮೆಯ ಒಡೆಯನಾಗಿದ್ದೆ. ನನ್ನ ಸ್ನೇಹಿತನಿಗೆ ನಮಸ್ಕಾರ ಹೇಳಿ, ಹಕ್ಕಿಯನ್ನು ಮನೆಗೆ ತೆಗೆದುಕೊಂಡು ಹೋದೆ. ಒಂದು ಹಳೆಯ ಪೆಟ್ಟಿಗೆ ಮತ್ತು ಕೆಲವು ಬಿದುರಿನ ಕೋಲುಗಳಿಂದ ಒಂದು ಪಂಜರವನ್ನು ಮಾಡಿದೆ, ಅದಕ್ಕೆ ತಿನ್ನಲು ಏನೋ ಒಂದಿಷ್ಟನ್ನು ತಂದುಕೊಟ್ಟು, ಕುಳಿತುಕೊಂಡೆ. ರಾತ್ರಿ ಅಡುಗೆಯಾಗುವವರೆಗೆ ಆ ಸುಂದರ ಪಕ್ಷಿಯನ್ನು ನೋಡುತ್ತಾ ಇದ್ದೆ.

ರಾತ್ರಿ ಊಟವಾದ ಮೇಲೆ ನೀರು ಹಕ್ಕಿಯ ಹತ್ತಿರ ವಾಪಸು ಬಂದೆ. ಅಪ್ಪರಲ್ಲಿ ನನ್ನ ಚಿಕ್ಕಮ್ಮನ ಬೈಗಳು ಧ್ವನಿ ಕೇಳಿಸಿತು. 'ಯಾರೋ ನನ್ನ ಸಿಗರೇಟ್‌ಗಳನ್ನು ಕದಿಯುತ್ತಿದ್ದಾರೆ' ಎಂದು ಹೇಳುತ್ತಾ, ನನ್ನನ್ನು ಬಿಟ್ಟು ಎಲ್ಲರನ್ನೂ ಕೇಳಿದಳು. ನಾನು ಧೂಮಪಾನ ಮಾಡುವುದಿಲ್ಲವೆಂಬುದು ಅವಳಿಗೆ ಗೊತ್ತಿತ್ತು. ಆದ್ದರಿಂದ ನಾನು ಅವಳ ಸಿಗರೇಟನ್ನು ತೆಗೆದುಕೊಂಡಿರಬಹುದೆಂಬ ಅನುಮಾನವೂ ಅವಳಿಗೆ ಬರಲಿಲ್ಲ.

ಕೊನೆಗೆ ನಮ್ಮ ಜೊತೆ ಮನೆಯಲ್ಲಿದ್ದ ಅವಳ ತಮ್ಮಂದಿರಲ್ಲಿ ಚಿಕ್ಕವನಾದ ನನ್ನ ಚಿಕ್ಕಪ್ಪ ಸ್ಯಾನ್ ಅಂಗ್‌ನೇ ಕಳ್ಳನಾಗಿರಬೇಕೆಂದು ನಿರ್ಧರಿಸಿದಳು. ಸಿಗರೇಟ್ ಡಬ್ಬದ ಮೇಲೆ ಮಣ್ಣಿನ ಕಲೆಗಳು ಇದ್ದವೆಂದೂ, ಬೆಳಗ್ಗೆ ಮೀನು ಹಿಡಿಯುತ್ತಿದ್ದಾಗ ಅವನ ಕೈಗಳಿಗೆ ಮಣ್ಣು ಆಗಿರಬೇಕೆಂದೂ ಹೇಳಿದಳು. ಅವಳು ಅವನನ್ನು ನಿಜವಾಗಿಯೂ ಬಯ್ಯಲಾರಂಭಿಸಿದಳು. ಬ್ಯಾಂಕನ್ನು ದರೋಡೆ ಮಾಡಿರುವವನೇನೋ

ಎಂಬಂತೆ ಬಯ್ಯುತ್ತಿದ್ದಾಳೆಂದು ಅನ್ನಿಸುತ್ತಿತ್ತು.'ಆದರೆ, ನಾನು ನಿನ್ನ ಸಿಗರೇಟುಗಳನ್ನು ತೆಗೆದುಕೊಂಡೇ ಇಲ್ಲ',ಎಂದು ಅವನು ಹೇಳುತ್ತಲೇ ಇದ್ದ. 'ಬೇಕಾದಾಗ ನಾನು ಯಾವಾಗಲೂ ನಿನ್ನನ್ನು ಕೇಳುತ್ತಿರಲಿಲ್ಲವೇ? ಅಷ್ಟಕ್ಕೂ ಈಗಲೂ ನನ್ನ ಬಳಿ ತುಂಬಾ ಇವೆ. ನೋಡು, ನನ್ನ ಪ್ಯಾಕ್ ಇಲ್ಲಿದೆ, ಹೆಚ್ಚು ಕಡಿಮೆ ಭರ್ತಿ ಇದೆ'.

'ಮತ್ಯಾರು ಬರುತ್ತಾರೆ?' ಎಂದಳು.

'ನಾನು ನಿನ್ನ ಸಿಗರೇಟುಗಳನ್ನು ಮುಟ್ಟಿಯೇ ಇಲ್ಲ'.

'ಸುಳ್ಳು ಹೇಳುತ್ತಿದ್ದೀಯಾ. ನೀನು ಕಳ್ಳ. ನೀನು ಮತ್ತೆ ನನ್ನನ್ನೆಂದೂ ಏನನ್ನೂ ಕೇಳಬೇಡ'.

ಚಿಕ್ಕಮ್ಮನ ಬೈಗಳ ಶಬ್ದವನ್ನು ಕೇಳಿದಾಗ ನನಗೆ ತುಂಬಾ ನಾಚಿಕೆಯಾಯಿತು. ಏಕೆಂದರೆ ನನ್ನ ತಪ್ಪಿಗಾಗಿ ನನ್ನ ಚಿಕ್ಕಪ್ಪ 'ಕಳ್ಳ' ಮತ್ತು 'ಸುಳ್ಳ' ಎಂದು ಅನ್ನಿಸಿಕೊಳ್ಳುತ್ತಿದ್ದ. ನಿಜವಾಗಿಯೂ ನಾನು ಅಷ್ಟು ಕೆಟ್ಟವನಾಗಬೇಕೆಂದು ಯೋಚಿಸದೆ ಇದ್ದ್ಯಾಗ್ಯೂ ನಾನೇ ನಿಜವಾದ ಕಳ್ಳನಾಗಿದ್ದೆ. ಸುಮ್ಮನಿದ್ದರೂ ನಾನು ಒಂದು ರೀತಿಯ ಸುಳ್ಳನೂ ಆಗುವುದಿಲ್ಲವೇ? ಮೌನವೂ ಕೂಡಾ ಒಂದು ರೀತಿಯ ಸುಳ್ಳಾಗುವುದಿಲ್ಲವೇ?

ನನ್ನ ಚಿಕ್ಕಮ್ಮ ಚಿಕ್ಕಪ್ಪ ಸ್ಯಾನ್ ಆಂಗ್ ಮೇಲೆ ಕಿರಿಚುತ್ತಲೇ ಇದ್ದಳು. ಮತ್ತೆ ಅವನಿಗೂ ಕೋಪ ಬರುತ್ತಿತ್ತು. ಅವನ ಮುಖ ತುಂಬಾ ಕೆಂಪಾಗಿತ್ತು.ಅವನು ನಿಜವಾಗಿಯೂ ತನ್ನ ಅಕ್ಕನನ್ನು ಹೊಡೆಯಲು ಹೋಗುತ್ತಿದ್ದಾನೆಂದು ನಾನು ಹೆದರಿದೆ. ಅನರ್ಥವಾಗುವುದಲ್ಲ ಎನಿಸಿತು.



ಅವರಿದ್ದ ಕೋಣೆಗೆ ಓಡಿ ಹೋಗಿ, 'ನನ್ನನ್ನು ಕ್ಷಮಿಸು, ಚಿಕ್ಕಮ್ಮ, ನಿನ್ನ ಸಿಗರೇಟುಗಳನ್ನು ತೆಗೆದುಕೊಂಡವನು ನಾನೇ' ಎಂದು ಹೇಳಿದೆ.

'ಓ! ಏನು?' ನನ್ನ ಚಿಕ್ಕಮ್ಮ ಮತ್ತು ಚಿಕ್ಕಪ್ಪ ಒಂದೇ ಸಲ ಕೇಳಿದರು.

'ನನಗೆ ಸಾಕಲು ಒಂದು ನೀರುಹಕ್ಕಿ ಪಡೆಯಬೇಕೆಂದು ಬಹಳ ಇಷ್ಟವಾಯಿತು. ಸಿಗರೇಟ್ ಅದರ ಬೆಲೆಯಾಗಿತ್ತು' ಅವರಿಗೆ ತಿಳಿಸಿ ಹೇಳಲು ಪ್ರಯತ್ನಿಸಿದೆ.

'ಯಾರು ಅದನ್ನು ಕೇಳಿದವರು?' ಚಿಕ್ಕಮ್ಮ ಕಿರಿಚಿದಳು 'ಕೇವಲ ಒಂದು ಮುದಿ ನೀರುಹಕ್ಕಿಗಾಗಿ ಕಳ್ಳತನ ಮಾಡುವೆಯಾ?'

ಚಿಕ್ಕಪ್ಪ ಕೂಡಾ ಬಯ್ಯಲು ಸೇರಿಕೊಂಡರು, 'ಕೇವಲ ಮಾಮೂಲಿ ಕಳ್ಳ, ನಿನಗೆ ನಾಚಿಕೆಯಾಗಲಿಲ್ಲವೇ? ಅದೂ ಕೇವಲ ಒಂದು ಮುದಿ ನೀರುಹಕ್ಕಿಗಾಗಿ'.

'ಇಲ್ಲ, ಇಲ್ಲ,' ನಾನು ಹೇಳಿದೆ. 'ಅದು ತುಂಬಾ ಸೊಗಸಾದ ಸುಂದರ ನೀರುಹಕ್ಕಿ ನನಗೆ ಬೇಕಾಗಿತ್ತು, ಅಷ್ಟೇ' ಅವರಿಗೆ ಇದು ಅರ್ಥವಾಗುತ್ತಿರಲಿಲ್ಲವೆಂಬುದು ನನಗೆ ತಿಳಿಯಿತು. 'ನನ್ನನ್ನು ಏಕೆ ಕೇಳಲಿಲ್ಲ?' ನನ್ನ ಚಿಕ್ಕಮ್ಮ ಕೇಳಿದಳು.

'ನೀನು ಬೇಡವೆನ್ನುವೆ ಎಂದು ಹೆದರಿದೆ'.

'ಸರಿ, ಯಾರಿಗೆ ನಿಜ ಹೇಳಲು ಧೈರ್ಯ ಇರುವುದಿಲ್ಲವೋ ಅವನೇ ಹೇಡಿ ಹಾಗೂ ಕಳ್ಳ'.

'ಇನ್ನೆಂದಿಗೂ ಹಾಗೆ ಮಾಡುವುದಿಲ್ಲ', ಎಂದು ನಾನು ಹೇಳಿದೆ. 'ಒಳ್ಳೆಯದು', ನನ್ನ ಚಿಕ್ಕಮ್ಮ ತನ್ನ ಉಳಿದ ಸಿಗರೇಟ್‌ಗಳಲ್ಲಿ ಒಂದನ್ನು ಸೇದುತ್ತಾ, ನಗುತ್ತಾ ಹೇಳಿದಳು.

'ಈ ಸಲ ನಿನ್ನನ್ನು ಕ್ಷಮಿಸುತ್ತೇನೆ, ಆದರೆ ಮತ್ತೆ ಇಂತಹ ಕೆಲಸ ಮಾಡಬೇಡ, ಇಲ್ಲದೆ ಹೋದರೆ ನೀನು ದೊಡ್ಡವನಾಗಿ ನಟಿಟ್ಟೊ ಹೆಸರಿಗೆ ಮಸಿ ಬಳಿಯುವೆ.'

'ಇಲ್ಲ, ಇಲ್ಲ, ಚಿಕ್ಕಮ್ಮ, ದಯವಿಟ್ಟು, ಹಾಗೆನ್ನಬೇಡಿ. ಈಗ ನಾನು ನಿಜ ಹೇಳಿದ್ದೇನೆ. ನಾನು ನಿಜವಾಗಿ ಕಳ್ಳನಲ್ಲ. ನಾನು ನಟಿಟ್ಟೊನಂಥ ಕಳ್ಳ ಎಂದು ನಿಮಗನ್ನಿಸುತ್ತಿದೆಯೆ? ನಿಜ ಹೇಳು ಚಿಕ್ಕಮ್ಮ?'

'ಇಲ್ಲ, ಇಲ್ಲ, ನೀನು ಕಳ್ಳನಲ್ಲ', ಅವಳು ನನ್ನ ಭುಜವನ್ನು ತಟ್ಟುತ್ತಾ ನಗುತ್ತಾ ಸ್ಪಷ್ಟವಾಗಿ ಹೇಳಿದಳು, – 'ಹಾಗಾದರೆ ಬಾ, ನಿನ್ನ ಚಿಕ್ಕಪ್ಪನಿಗೂ ಹಾಗೂ ನನಗೂ ಆ ಸೊಗಸಾದ ಸುಂದರ ನೀರುಹಕ್ಕಿಯನ್ನು ತೋರಿಸು' ಎಂದುಮತ್ತೆ ಜೋರಾಗಿ ನಕ್ಕಳು.

ನಾವು ಮೂವರೂ ಆ ನೀರುಹಕ್ಕಿಯ ಪಂಜರದ ಬಳಿ ಹೋದಾಗ, ನನ್ನಷ್ಟಕ್ಕೆ ನಾನೇ, 'ಇಲ್ಲ, ನಾನು ಎಂದಿಗೂ ನಟಿಟ್ಟೊನಂತೆ ಕಳ್ಳನಾಗುವುದಿಲ್ಲ' ಎಂದುಕೊಂಡೆ.

ಚಿತ್ರಗಳು: ಯೂ ಸೈನ್

ಭಾರತ

# ಮೇಡಂನ ಬಸ್ ಸವಾರಿ

## ವಳ್ಳಿ ಕಣ್ಣನ್

ವಳ್ಳಿಯಮ್ಮ ಎಂಬ ಹೆಸರಿನ ಹುಡುಗಿ ಇದ್ದಳು. ಇವಳನ್ನು ಚಿಕ್ಕದಾಗಿ 'ವಳ್ಳಿ' ಎಂದೇ ಕರೆಯುತ್ತಿದ್ದರು.ಇವಳಿಗೆ ಎಂಟು ವರ್ಷ ವಯಸ್ಸು. ಇವಳಿಗೆ ಎಲ್ಲಾ ವಸ್ತುಗಳಲ್ಲೂ ತುಂಬಾ ಕುತೂಹಲ. ಇವಳ ಇಷ್ಟವಾದ ಹೊತ್ತು ಕಳೆಯುವ ಕೆಲಸವೆಂದರೆ, ಮನೆಯ ಹೊಸ್ತಿಲಲ್ಲಿ ನಿಂತುಕೊಂಡು ರಸ್ತೆಯಲ್ಲಿ ಏನು ನಡೆಯುತ್ತಿದೆ ಎಂಬುದನ್ನು ನೋಡುತ್ತಾ ಇರುವುದು. ಆಟವಾಡಲು ಇವರ ಮನೆ ಬೀದಿಯಲ್ಲಿ ಇವಳ ವಯಸ್ಸಿನ ಆಟವಾಡುವ ಮಕ್ಕಳು ಯಾರೂ ಇರಲಿಲ್ಲವಾದ್ದರಿಂದ ಸಾಮಾನ್ಯವಾಗಿ ಒಂಟಿಯಾಗೇ ಇರುತ್ತಿದ್ದಳು. ರಸ್ತೆಯಲ್ಲಿ ಏನಾಗುತ್ತಿದೆ, ಯಾರು ಬರುತ್ತಿದ್ದಾರೆ, ಯಾರು ಹೋಗುತ್ತಿದ್ದಾರೆ ಇದನ್ನು ನೋಡುವುದೇ ಇವಳ ಕೆಲಸವಾಗಿತ್ತು. ಇವಳೊಬ್ಬಳೇ ಇದ್ದದ್ದರಿಂದ ಯಾವ ಆಟ ತಾನೇ ಆಡಿಯಾಳು? ಮನೆ ಬಾಗಿಲಲ್ಲಿ ನಿಂತುಕೊಂಡು ಹೊರಗಡೆ ಏನಾಗುತ್ತಿದೆ ಎಂಬುದನ್ನು ಕುತೂಹಲದಿಂದ ಗಮನಿಸುವುದೇ ಇವಳ ಆಟವಾಗಿತ್ತು. ಇದರಲ್ಲೇ ಇವಳು ಆನಂದವನ್ನು ಅನುಭವಿಸುತ್ತಿದ್ದಳು. ಹೊಸ ಹೊಸ ಘಟನೆಗಳು, ಹೊಸ ಹೊಸ ಅನುಭವಗಳು, ಒಮ್ಮೊಮ್ಮೆ ಘಟಿಸುವ ಘಟನೆಗಳು ಅತ್ಯದ್ಭುತವಾಗಿರುತ್ತಿದ್ದುವು.

ಒಂದು ಸಲ ಒಬ್ಬ ವಿದೇಶೀ ಸಿಪಾಯಿ ಆ ಬೀದಿಯಲ್ಲಿ ಹೋಗುತ್ತಿದ್ದ. ಅವನು ತನ್ನ ಮನೆಯ ಹತ್ತಿರ ಬಂದಾಗ, ಅವನನ್ನು ಗಮನವಿಟ್ಟು ನೋಡಿದಳು. ಅವನು ಎಷ್ಟು ಸುಂದರವಾಗಿದ್ದ, ಎಂಥ ಆಕರ್ಷಕ ಬಣ್ಣ! ಎಷ್ಟು ಸೊಗಸಾದ ಬಟ್ಟೆಗಳನ್ನು ಧರಿಸಿದ್ದನು; ಅವನು ಅಲ್ಲಿಂದ ಹಾದು ಹೋಗುವಾಗ ಹೆಂಗಸರು ಮುಗುಳ್ನಕ್ಕು ಅವನ ದೃಷ್ಟಿಯನ್ನು ಸೆಳೆಯಲು ಯತ್ನಿಸಿದರು. ಆದರೆ, ಕೆಲವು ಮಕ್ಕಳು ಹಾಗೂ ವಯಸ್ಕರು ಕೂಡಾ ಆ ಸಿಪಾಯಿಯ ನೋಟದಿಂದ ಹೆದರಿಕೊಂಡು ತಮ್ಮ ಮನೆಗಳೊಳಗೆ ಅವಿತುಕೊಂಡರು. ಆದರೆ, ವಳ್ಳಿ ಹಾಗಲ್ಲ, ಅವಳು ತನ್ನ ಹಿಮ್ಮಡಿಗಳನ್ನು ಕೂಡಿಸಿ ಸೆಟೆದು ನಿಂತು, ಚೂಟಿಯಾಗಿ ಸೆಲ್ಯೂಟ್ ಹೊಡೆದು, 'ನಮಸ್ಕಾರ' ಎಂದು ಹೇಳಿದಳು.

ಆ ಸಿಪಾಯಿ ನಿಂತುಕೊಂಡು ಅವಳ ಕಡೆ ಮುಗುಳ್ನಗೆ ಬೀರಿದನು.

'ಗುಡ್ ಮಾರ್ನಿಂಗ್' ಎಂದು ಹೇಳಿ ಅವನು ತನ್ನ ದಾರಿ ಹಿಡಿದುಕೊಂಡು ಹೋದನು.

ವಳ್ಳಿಯ ಸಂತೋಷಕ್ಕೆ ಎಲ್ಲೆಯೇ ಇರಲಿಲ್ಲ. ಎಲ್ಲರ ಮುಂದೆಯೂ ಆ ಕೆಂಪು ಸಿಪಾಯಿ ನಿಜವಾಗಿಯೂ ತನ್ನೊಡನೆ ಮಾತನಾಡಿದನೆಂದು ಜಂಭಹೊಡೆದುಕೊಳ್ಳುತ್ತಾ, ಕುಣಿದಾಡಿದಳು.

'ತುಂಬಾ ಧೈರ್ಯವಂತೆ' ಎಂದು ನೆರೆಹೊರೆಯವರು ಹೇಳಿದರು. ತನ್ನ ಬೀದಿಯ ಜನಗಳಲ್ಲಿ ಇವಳ ಪ್ರಾಮುಖ್ಯತೆ ಸಾಕಷ್ಟು ಹೆಚ್ಚಿತು.

ಈಗ ಇವಳ ಮನೆಯ ಮುಂದೆ ಸಾಧಾರಣವಾಗಿ ಅಷ್ಟೊಂದು ವಾಹನಗಳ ಸಂಚಾರವೇನೂ ಇರಲಿಲ್ಲವೆಂಬುದೇನೋ ನಿಜ. ಆದರೆ ಅದರ ಅರ್ಥ ಅಕ್ಕಪಕ್ಕದಲ್ಲಿ ಘಟನೆಗಳೇನೂ ನಡೆಯುತ್ತಿರಲಿಲ್ಲ ಎಂದಲ್ಲ. ಆಗಾಗ್ಗೆ, ಉದಾಹರಣೆಗೆ, ನೆರೆಹೊರೆಯವರು ಒಂದಲ್ಲ ಒಂದು ವಿಷಯಕ್ಕಾಗಿ ಬರುತ್ತಾ, ಹೋಗುತ್ತಾ ಇರುವುದನ್ನು ಇವಳೂ ನೋಡಬಹುದಾಗಿತ್ತು. ಒಮ್ಮೊಮ್ಮೆ ಒಂದು ಎತ್ತಿನಗಾಡಿ ತನ್ನ ಎಣ್ಣೆಯಿಲ್ಲದ ಚಕ್ರಗಳಿಂದ ಕೀರಲು ಧ್ವನಿ ಹಾಗೂ ಆರ್ತನಾದವನ್ನು ಮಾಡುತ್ತಾ ಹೋಗುತ್ತಿತ್ತು; ಎತ್ತುಗಳ ಕೊರಳಿನ ಗಂಟೆಗಳು ಮೆಲ್ಲಗೆ ಕಿಂಕಿಣಿ ಶಬ್ದ ಮಾಡುತ್ತಿದ್ದುವು. ಕೆಲವು ವೇಳೆ ನಾಯಿಯೊಂದು ಏನೋ ಭಾರಿ ಕೆಲಸವಿರುವುದೇನೋ ಎನ್ನುವಂತೆ ಸರ್ರನೆ ಎದ್ದು ರಸ್ತೆಯ ಮಧ್ಯೆ ಓಡುತ್ತಿತ್ತು. ಕೂಡಲೇ ಅದು ನಿಂತು ಸುತ್ತಲೂ ಮೂಸಿನೋಡಿ ಯಾವುದೋ ರಸ್ತೆ ಮಗ್ಗುಲಿನ ಗಿಡವನ್ನು ಒದ್ದೆ ಮಾಡಲು ಒಂದು ಕಾಲನ್ನು ಎತ್ತುತ್ತಿತ್ತು. ಆಮೇಲೆ ಎಲ್ಲೋ ಏನೋ ಮರೆತಿರುವಂತೆ, ಅದನ್ನು ಹುಡುಕುತ್ತಿರುವಂತೆ ಹಿಂದಕ್ಕೆ ರಸ್ತೆಯ ಕೆಳಗೆ ನುಗ್ಗುತ್ತಾ ಹೋಗುತ್ತಿತ್ತು. ಆಗಾಗ್ಗೆ ಭಿಕ್ಷುಕರು, ಮತ್ತು ರಸ್ತೆ ವ್ಯಾಪಾರಿಗಳು......ಬರುತ್ತಿದ್ದರು. ಏನೆಲ್ಲಾ, ಯಾರೆಲ್ಲಾ ವಳ್ಳಿಗೆ ನೋಡಲು ಸಿಗುತ್ತಿದ್ದರು. ದಿನವಿಡೀ ಬೀದಿಯಲ್ಲಿ ಏನಾದರೂ ನಡೆದೇ ಇರುತ್ತದೆ, ಒಳ್ಳೆಯ ಮನರಂಜನೆಯಾಗುತ್ತಿತ್ತು.

ಇವೆಲ್ಲಕ್ಕಿಂತ, ತುಂಬಾ ಆಕರ್ಷಣೀಯವಾದ ವಿಷಯವೆಂದರೆ, ಅವಳ ಹಳ್ಳಿ ಮತ್ತು ಹತ್ತಿರದ ಪಟ್ಟಣದ ಮಧ್ಯೆ ಓಡಾಡುತ್ತಿದ್ದ ಬಸ್. ಪ್ರತಿ ಗಂಟೆಗೂ ಅದು ಆ ಬೀದಿಯಿಂದ ಹಾದು ಹೋಗುತ್ತಿತ್ತು. ಪಟ್ಟಣದ ಕಡೆ ಹೋಗಿ ಹಿಂದಿರುಗಿ ಬರುತ್ತಿತ್ತು. ಪ್ರತಿ ಸಲವೂ ಹೊಸ ಹೊಸ ಪ್ರಯಾಣಿಕರನ್ನು ತುಂಬಿಕೊಂಡು ಬರುತ್ತಿದ್ದ ಬಸ್ಸಿನ ದೃಶ್ಯ ವಳ್ಳಿಗೆ ಒಂದು ಮುಗಿಯಲಾರದ ಸಂತೋಷದ ಮೂಲವಾಗಿತ್ತು.

ದಿನಂಪ್ರತಿ ಅವಳು ಬಸ್ಸನ್ನು ಗಮನಿಸುತ್ತಿದ್ದ ಹಾಗೆ ಕ್ರಮೇಣ ಒಂದು ಚಿಕ್ಕ ಆಸೆ ಅವಳ ತಲೆಯಲ್ಲಿ ಹೊಕ್ಕು ಬೆಳೆಯಿತು. ಕಡೇಪಕ್ಷ ಒಂದು ಸಲವಾದರೂ

ಆ ಬಸ್‌ನಲ್ಲಿ ಸವಾರಿ ಮಾಡಬೇಕೆಂದು ಅವಳು ಇಷ್ಟಪಟ್ಟಳು. ದಿನ ದಿನಕ್ಕೆ ಅವಳ ಆಸೆ ಬಲವಾಗುತ್ತಾ ಹೋಯಿತು. ರಸ್ತೆಯ ಮೂಲೆಯಲ್ಲಿ ಬಸ್ ನಿಂತಾಗ, ಬಸ್‌ಗೆ ಹತ್ತುವ ಮತ್ತು ಬಸ್‌ನಿಂದ ಇಳಿಯುವ ಪ್ರಯಾಣಿಕರ ಕಡೆ ಅವಳು ಆಸಕ್ತಿಯಿಂದ ಗಮನವಿಟ್ಟು ನೋಡುವಳು. ಅವರ ಮುಖಗಳು ಅವಳ ಆಕಾಂಕ್ಷೆಗಳು, ಕನಸುಗಳು ಮತ್ತು ಆಸೆಗಳನ್ನು ಜಾಗೃತಗೊಳಿಸದುವು. ಅವಳ ಸ್ನೇಹಿತರುಗಳಲ್ಲಿ ಯಾರಾದರೂ ಬಸ್‌ನಲ್ಲಿ ಸವಾರಿ ಮಾಡಿ ಅವಳಿಗೆ ಪಟ್ಟಣದ ದೃಶ್ಯಗಳನ್ನು ವರ್ಣನೆ ಮಾಡುತ್ತಾ ಹೋದರೆ, ವಳ್ಳಿಗೆ ಅದನ್ನು ಕೇಳಿದಾಗ ಹೊಟ್ಟೆಕಿಚ್ಚು ಬರುತ್ತಿತ್ತು. "ಭಾರಿ ಜಂಭ" ಎನ್ನುತ್ತಿದ್ದಳು. ಅವಳಿಗೆ ಆ ಪದದ ಅರ್ಥ ಗೊತ್ತಿರಲಿಲ್ಲ, ಆದರೆ ಆ ಪದವನ್ನು ಒಳ್ಳೆಯವರಿಗೆ ಉಪಯೋಗಿಸುವುದಿಲ್ಲವೆಂದು ಮಾತ್ರ ಗೊತ್ತಿತ್ತು.

ಅನೇಕ ದಿನಗಳು ಹಾಗೂ ತಿಂಗಳುಗಳ ಕಾಲ ವಳ್ಳಿ ಎಚ್ಚರಿಕೆಯಿಂದ ತನ್ನ ನೆರೆಹೊರೆಯವರ ಮತ್ತು ದಿನವೂ ಬಸ್ಸನ್ನುಉಪಯೋಗಿಸುವ ಜನಗಳ ಮಧ್ಯೆ ನಡೆಯುವ ಸಂಭಾಷಣೆಗಳನ್ನು ಎಚ್ಚರಿಕೆಯಿಂದ ಕೇಳುತ್ತಿದ್ದಳು. ಈ ರೀತಿ ಅವಳು ಬಸ್ ಪ್ರಯಾಣದ ಬಗ್ಗೆ ಅನೇಕ ಚಿಕ್ಕ ಪುಟ್ಟ ವಿವರಗಳನ್ನು ಗ್ರಹಿಸುತ್ತಿದ್ದಳು. ಪಟ್ಟಣ ಅವಳ ಹಳ್ಳಿಯಿಂದ ಆರು ಮೈಲಿ ದೂರದಲ್ಲಿತ್ತು. ಒಂದು ಕಡೆಯ ಟಿಕೆಟ್‌ಗೆ "ಕೇವಲ ಮೂವತ್ತೇ ಪೈಸೆ" ಎಂದು ಒಬ್ಬ ಚೆನ್ನಾಗಿ ಬಟ್ಟೆ ಹಾಕಿದ ಮನುಷ್ಯ ಹೇಳಿದ್ದನ್ನು ಕೇಳಿದಳು. ವಳ್ಳಿ ಇಡೀ ತಿಂಗಳು ಕೂಡಿಹಾಕಿದರೂ ಅಷ್ಟೊಂದು ಹಣ ಪಡೆಯುವುದು ಅವಳ ಊಹೆಗೂ ಮೀರಿದ ವಿಷಯವಾಗಿತ್ತು. ಪಟ್ಟಣಕ್ಕೆ ಪ್ರಯಾಣ ನಲ್ವತ್ತೈದು ನಿಮಿಷಗಳು ಆಗುತ್ತಿತ್ತು. ಪಟ್ಟಣ ತಲುಪಿದ ಮೇಲೆ, ಅವಳ ಜಾಗದಲ್ಲೇ ಉಳಿದುಕೊಂಡು, ಇನ್ನೊಂದು ಮೂವತ್ತು ಪೈಸೆಗಳನ್ನು ಕೊಟ್ಟರೆ ಅದೇ ಬಸ್‌ನಲ್ಲಿ ತನ್ನ ಮನೆಗೆ ವಾಪಸು ಬರಬಹುದಿತ್ತು. ಒಂದು ಗಂಟೆಯ ಮಧ್ಯಾಹ್ನದ ಬಸ್ಸನ್ನು ಹಿಡಿದರೆ ಪಟ್ಟಣವನ್ನು ಒಂದೂ ಮುಕ್ಕಾಲಿಗೆ ತಲುಪಬಹುದು, ಮನೆಗೆ ಎರಡೂ ನಲ್ವತ್ತೈದಕ್ಕೆ ವಾಪಸಾಗಬಹುದಾಗಿತ್ತು.

ಅವಳು ಮತ್ತೆ ಮತ್ತೆ ಲೆಕ್ಕ ಮಾಡಿ ಯೋಜನೆಗಳನ್ನು ಹಾಕಿಕೊಂಡಂತೆ, ಅವಳ ಯೋಜನೆಗಳು ಹೀಗೇ ಮುಂದುವರಿಯುತ್ತಾ ಹೋಗುತ್ತಿದ್ದುವು.

ಒಂದು ಸುಗ್ಗಿಯ ದಿನ ಮಧ್ಯಾಹ್ನದ ಹೊತ್ತು ಬಸ್ಸು ಇನ್ನೇನು ಹಳ್ಳಿಯನ್ನು ಬಿಡುವುದರಲ್ಲಿತ್ತು. ಮುಖ್ಯ ರಸ್ತೆಯಲ್ಲಿ ತಿರುಗುತ್ತಿದ್ದಾಗ 'ಬಸ್ ನಿಲ್ಲಿಸು, ಬಸ್ ನಿಲ್ಲಿಸು', ಎಂಬ ಸಣ್ಣ ಧ್ವನಿ ಕೇಳಿಸಿತು. ಪುಟ್ಟದೊಂದು ಕೈ ಆದೇಶ ನೀಡುವಂತೆ ಎತ್ತಿತ್ತು.

ಬಸ್ಸು ನಿಂತಿತು. ಕಂಡಕ್ಟರ್ ಬಾಗಿಲಿನಿಂದ ಹೊರಗೆ ತಲೆಹಾಕುತ್ತಾ, "ಓಹೋ, ಇವತ್ತು ನೀನು ಬರುತ್ತಿದ್ದೀಯಾ?" ಎಂದ. ವಳ್ಳಿ ಪ್ರತಿನಿತ್ಯ ಬಾಗಿಲಲ್ಲಿ ನಿಂತು ನೋಡುತ್ತಿದ್ದುದನ್ನು ಅವನು ಗಮನಿಸಿದ್ದ. ಇನ್ನೂ ಬಸ್ಸಿನ ಹೊರಗೆ ನಿಂತಿದ್ದ

ವಳ್ಳಿ, 'ಹೌದು, ನಾನು ಪಟ್ಟಣಕ್ಕೆ ಹೋಗಬೇಕು, ಇಗೋ ಹಣ' ಎನ್ನುತ್ತಾ ಕೆಲವು ನಾಣ್ಯಗಳನ್ನು ಅವನಿಗೆ ತೋರಿಸಿದಳು.

'ಸರಿ, ಸರಿ, ಮೊದಲು ಬಸ್ಸು ಹತ್ತು' ಕಂಡಕ್ಟರ್ ಅವಳನ್ನು ಮೇಲಕ್ಕೆ ಹತ್ತಿಸಿಕೊಳ್ಳಲು ಸಹಾಯಮಾಡುವಂತೆ ಕೈಚಾಚಿದನು.

'ಪರವಾಗಿಲ್ಲ' 'ನಾನೇ ಹತ್ತಬಲ್ಲೆ, ನೀನೇನೂ ಸಹಾಯ ಮಾಡಬೇಕಾಗಿಲ್ಲ'.

ಕಂಡಕ್ಟರ್ ತಮಾಷೆ ಸ್ವಭಾವದವನಾಗಿದ್ದ, ತಮಾಷೆ ಮಾಡುತ್ತಾ 'ಓ ದಯವಿಟ್ಟು ನನ್ನೊಡನೆ ಕೋಪಿಸಿಕೊಳ್ಳಬೇಡಿ, ಮೇಡಂ. ಇಲ್ಲಿ ಮುಂದೆ ಕುಳಿತುಕೊಳ್ಳಿ, ಎಲ್ಲರೂ ದಯವಿಟ್ಟು ಪಕ್ಕಕ್ಕೆ ಸರಿಯಿರಿ– ಮೇಡಂಗೆ ದಾರಿ ಬಿಡಿ'ಎಂದ.

ಬಸ್‌ನಲ್ಲಿ ಅಂದು ನೂಕುನುಗ್ಗಲು ಇರಲಿಲ್ಲ. ಆರೇಳು ಪ್ರಯಾಣಿಕರು ಮಾತ್ರ ಇದ್ದರು. ಅವರೆಲ್ಲಾ ವಳ್ಳಿ ಕಡೆ ನೋಡುತ್ತಾ ಕಂಡೆಕ್ಟರ್ ಜೊತೆಗೆ ನಗುತ್ತಿದ್ದರು. ವಳ್ಳಿ ನಾಚುತ್ತಾ ಎಲ್ಲರ ಕಣ್ಣುಗಳನ್ನು ತಪ್ಪಿಸಿ, ಬೇಗನೆ ಒಂದು ಖಾಲಿ ಜಾಗದಲ್ಲಿ ಕುಳಿತುಕೊಂಡಳು.

'ಈಗ ನಾವು ಹೊರಡಬಹುದೇ ಮೇಡಂ' ನಗುತ್ತಾ ಕಂಡಕ್ಟರ್ ಕೇಳಿದನು. ಎರಡು ಸಲ ಸೀಟಿ ಊದಿದನು, ಬಸ್ ಭರ್ರನೆ ಮುಂದೆ ಚಲಿಸಿತು.

ಅದೊಂದು ಹೊಸ ಬಸ್. ಅದರ ಹೊರಭಾಗ, ಕೆಲವು ಹಸಿರು ಪಟ್ಟಿಗಳೊಡನೆ ಕೂಡಿದ ಬಿಳಿ ಬಣ್ಣದಿಂದ ಹೊಳೆಯುತ್ತಿತ್ತು. ಒಳಗಡೆ ತಲೆ ಮೇಲಿನ ಕಂಬಿಗಳು ಬೆಳ್ಳಿಯಂತೆ ಹೊಳೆಯುತ್ತಿದ್ದುವು. ವಳ್ಳಿಯ ಎದುರಿಗೆ, ಒಂದು ಸುಂದರವಾದ ಗಡಿಯಾರವಿತ್ತು. ಆಸನಗಳು ಮೆತ್ತಗೆ ಹಿತಕರವಾಗಿದ್ದುವು.

ವಳ್ಳಿ ಎಲ್ಲವನ್ನೂ ತನ್ನ ಕಣ್ಣುಗಳಲ್ಲಿ ತುಂಬಿಕೊಂಡಳು, ಆದರೆ ಅವಳು ಹೊರಗಡೆ ನೋಡಲು ಪ್ರಾರಂಭಿಸಿದಾಗ, ಕಿಟಕಿಯ ತಳಭಾಗದಲ್ಲಿ ಕ್ಯಾನ್ವಾಸ್ ಇದ್ದದ್ದರಿಂದ ಹೊರಗಿನ ನೋಟ ಕಾಣಿಸುತ್ತಿರಲಿಲ್ಲ. ಆದ್ದರಿಂದ, ಅವಳು ಆಸನದ ಮೇಲೆ ನಿಂತುಕೊಂಡು ತೆರೆಯ ಮೇಲೆ ಬಗ್ಗಿದಳು.

ಬಸ್ಸು ಈಗ ಕಾಲುವೆಯ ದಡದ ಮೇಲೆ ಉದ್ದಕ್ಕೂ ಹೋಗುತ್ತಿತ್ತು. ರಸ್ತೆ ಇಕ್ಕಟ್ಟಾಗಿತ್ತು, ಕಾಲುವೆ ಅದರ ಆಚೆಗೆ ತಾಳೆಮರ, ಹುಲ್ಲುಗಾವಲು, ದೂರದ ಪರ್ವತ ಮತ್ತು ನೀಲಿ ಆಕಾಶ, ಆ ಕಡೆ ಪಕ್ಕದಲ್ಲಿ ಒಂದು ಆಳವಾದ ಪ್ರಪಾತ, ಅತ್ತ ವಿಸ್ತಾರವಾದ ಹಸಿರು ಹೊಲಗಳು – ಕಣ್ಣು ಎಷ್ಟು ದೂರ ನೋಡಬಲ್ಲದೋ ಅಷ್ಟು ದೂರ ಹಸಿರೇ ಹಸಿರು.

'ಮಗೂ, ನೀನು ಹಾಗೆ ನಿಂತುಕೊಳ್ಳಬಾರದು. ಕುಳಿತುಕೋ' ಯಾರದೋ ಧ್ವನಿ ಕೇಳಿ ಬೆಚ್ಚಿದಳು.

ಕುಳಿತುಕೊಂಡು, ಯಾರ ಧ್ವನಿ ಎಂದು ತಿರುಗಿ ನೋಡಿದಳು. ಅವಳ ಬಗ್ಗೆ ತುಂಬಾ ಪ್ರಾಮಾಣಿಕವಾಗಿ ಕಾಳಜಿ ವಹಿಸಿದ್ದ ಒಬ್ಬ ಹಿರಿಯ ವ್ಯಕ್ತಿ. ಆದರೆ ಅವನ ಮಾತಿನಿಂದ ಅವಳು ಕೋಪಿಸಿಕೊಂಡಳು.

'ಇಲ್ಲಿ ಯಾವ ಮಗುವೂ ಇಲ್ಲ', ಎಂದು ಜಂಭದಿಂದ ಹೇಳಿದಳು, 'ನಾನೂ ಎಲ್ಲರಂತೆ ಮೂವತ್ತು ಪೈಸೆಯನ್ನು ಕೊಟ್ಟಿದ್ದೇನೆ'.

ಕಂಡಕ್ಟರ್ ಇವರ ಮಧ್ಯೆ ಬಾಯಿ ಹಾಕಿ 'ಓ ಸ್ವಾಮಿ, ಇವರು ತುಂಬಾ ದೊಡ್ಡ ಮೇಡಂ. ಸಣ್ಣ ಹುಡುಗಿ ಎಲ್ಲಾದರೂ ತನ್ನ ಪ್ರಯಾಣದ ಬಾಡಿಗೆಯನ್ನು ತಾನೇ ಕೊಡಬಲ್ಲಳು, ಪಟ್ಟಣಕ್ಕೆ ಒಬ್ಬಳೇ ಪ್ರಯಾಣ ಮಾಡಬಲ್ಲಳು ಎಂದು ನೀವು ತಿಳಿದಿರುವಿರಾ?'

ವಳ್ಳಿ ಕಂಡಕ್ಟರ್ ಕಡೆ ಕೋಪದ ದೃಷ್ಟಿಯನ್ನು ಬೀರಿ ಹೇಳಿದಳು; 'ನಾನು ಮೇಡಂ ಅಲ್ಲ, ದಯವಿಟ್ಟು ಅದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ. ನೀವಿನ್ನೂ ನನಗೆ ಟಿಕೆಟ್ ಕೊಟ್ಟಿಲ್ಲ.'

ಅವಳ ಧ್ವನಿಯನ್ನು ಅನುಕರಿಸುತ್ತಾ ಕಂಡಕ್ಟರ್ 'ಹೌದೌದು ನೆನಪಿದೆ' ಎಂದನು. ಎಲ್ಲರೂ ನಕ್ಕರು, ವಳ್ಳಿ ಕೂಡಾ ನಗುತ್ತಿದ್ದಳು.

ಕಂಡಕ್ಟರ್ ಒಂದು ಟಿಕೆಟ್‌ಗೆ ಪಂಚ್ (ರಂಧ್ರ) ಮಾಡಿ ಅವಳ ಕೈಗೆ ಕೊಟ್ಟು ಹೇಳಿದ, ಸುಮ್ಮನೆ ಆರಾಮಾಗಿ ಕುಳಿತುಕೋ, ಆಸನಕ್ಕಾಗಿ ಹಣ ಕೊಟ್ಟ ಮೇಲೆ ಏಕೆ ನಿಂತುಕೊಳ್ಳಬೇಕು?

'ನನಗೆ ನಿಂತುಕೊಳ್ಳಬೇಕು ಅನ್ನಿಸುತ್ತೆ', ಅವಳು ಉತ್ತರ ಕೊಟ್ಟು ಪುನಃ ನಿಂತುಕೊಂಡಳು.

'ಆದರೆ, ಆಸನದ ಮೇಲೆ ನಿಂತುಕೊಂಡರೆ ಬಸ್ ತಿರುಗುವಾಗ ಅಥವಾ ಬ್ರೇಕ್ ಹಾಕಿದಾಗ, ನೀನು ಬೀಳಬಹುದು ಮತ್ತು ಪೆಟ್ಟು ತಾಕಬಹುದು. ಅದಕ್ಕೇ ನಿನ್ನನ್ನು ಕುಳಿತುಕೊ ಎಂದದ್ದು ಮಗೂ'.

'ನಾನು ಮಗುವಲ್ಲ' ಅವಳು ಕೋಪದಿಂದ ಹೇಳಿದಳು 'ನನಗೆ ಎಂಟು ವರ್ಷ ಆಗಿದೆ.'

'ಹೌದಲ್ಲವೆ!– ನಾನು ಎಷ್ಟು ಪೆದ್ದ, ಎಂಟು ವರ್ಷ– ಅಬ್ಬಾ!'

ಕಂಡೆಕ್ಟರ್ ಮತ್ತೆ ತನ್ನ ಕೆಲಸದಲ್ಲಿ ಮುಳುಗಿದ. ಬಸ್ ನಿಂತಿತು. ಹೊಸ ಪ್ರಯಾಣಿಕರು ಹತ್ತಿದರು. ಸೀಟು ಕಳೆದುಕೊಳ್ಳುವೆನೆಂಬ ಭಯದಿಂದ ವಳ್ಳಿ ಅಲ್ಲೇ ಕುಳಿತಳು.

ಒಬ್ಬ ವಯಸ್ಸಾದ ಹೆಂಗಸು ಬಂದು ಅವಳ ಪಕ್ಕದಲ್ಲಿ ಕುಳಿತುಕೊಂಡಳು, 'ಮಗೂ, ನೀನು ಒಬ್ಬಳೇ ಇದ್ದೀಯಾ?' ಬಸ್ ಪುನಃ ಹೊರಟಾಗ, ಅವಳು ವಳ್ಳಿಯನ್ನು ಕೇಳಿದಳು.

ವಳ್ಳಿಗೆ ಆ ಹೆಂಗಸನ್ನು ಕಂಡು ತುಂಬಾ ಅಸಹ್ಯವೆನಿಸಿತು–ಅವಳ ಕಿವಿಯ ಹಾಳೆಗಳಲ್ಲಿ ಅಷ್ಟು ದೊಡ್ಡ ತೂತನ್ನು ನೋಡಿದಳು, ಅಷ್ಟೊಂದು ಕೊಳಕಾದ ಕಿವಿಯ ಅಭರಣವನ್ನು ಅದರಲ್ಲಿ ಹಾಕಿಕೊಂಡಿದ್ದಳು, ಅವಳು ಅಗಿಯುತ್ತಿದ್ದ ಅಡಿಕೆ ವೀಳ್ಯದ ವಾಸನೆ ಅವಳ ಮುಖಕ್ಕೆ ರಾಚುತ್ತಿತ್ತು. ವೀಳ್ಯದ ರಸ ಯಾವ



ಕ್ಷಣವಾದರೂ ಅವಳ ತುಟಿಗಳಿಂದ ಹೊರ ಚಿಮ್ಮುವ ಭಯವಿತ್ತು- ಅಂತಹ ಮನುಷ್ಯರ ಜೊತೆ ಯಾರು ತಾನೇ ಸ್ನೇಹ ಮಾಡಿಕೊಳ್ಳುತ್ತಾರೆ?

'ಹೌದು ನಾನೊಬ್ಬಳೇ ಪ್ರಯಾಣ ಮಾಡುತ್ತಿದ್ದೇನೆ'.

ಮೊಟಕಾಗಿ ಉತ್ತರ ಕೊಟ್ಟಳು, 'ನನ್ನ ಬಳಿ ಟಿಕೆಟು ಕೂಡ ಇದೆ'.

'ಹೌದು, ಮೂವತ್ತು ಪೈಸಾ ಟಿಕೆಟಿನೊಡನೆ ಅವಳು ಪಟ್ಟಣಕ್ಕೆ ಹೋಗುತ್ತಿದ್ದಾಳೆ', ಕಂಡಕ್ಟರ್ ಹೇಳಿದ.

'ನಿನ್ನ ಕೆಲಸ ನೀನು ನೋಡು' ವಳ್ಳಿ ಹೇಳಿದಳು. ಆದರೆ, ಹಾಗೆಯೇ ನಕ್ಕಳು ಮತ್ತು ಕಂಡಕ್ಟರ್ ಕೂಡಾ ನಕ್ಕನು.

ಆ ಮುದುಕಿ ತನ್ನ ಅನುಮಾನವನ್ನು ಮುಂದುವರಿಸುತ್ತಲೇ ಹೋದಳು. 'ಇಷ್ಟು ಚಿಕ್ಕವಳು ಒಬ್ಬಳೇ ಪ್ರಯಾಣ ಮಾಡುವುದು ಸರಿಯೇ? ಪಟ್ಟಣದಲ್ಲಿ ನೀನು ಎಲ್ಲಿಗೆ ಹೋಗಬೇಕು ಎಂಬುದು ನಿನಗೆ ಸರಿಯಾಗಿ ಗೊತ್ತೆ? ಬೀದಿ ಯಾವುದು? ಮನೆಯ ನಂಬರ್ ಏನು?'

'ನೀವು ನನ್ನ ಬಗ್ಗೆ ಯೋಚಿಸಬೇಕಾಗಿಲ್ಲ. ನನಗೆಲ್ಲಾ ಗೊತ್ತಿದೆ' ವಳ್ಳಿ ಕಿಟಕಿಯ ಕಡೆ ತನ್ನ ಮುಖವನ್ನು ತಿರುಗಿಸಿ ಹೊರಗೆ ನೋಡುತ್ತಾ ಹೇಳಿದಳು.

ಅವಳ ಮೊದಲ ಪ್ರಯಾಣಕ್ಕಾಗಿ ಎಷ್ಟು ಎಚ್ಚರಿಕೆಯಿಂದ, ಕಷ್ಟ ತೆಗೆದುಕೊಂಡು, ಮಹತ್ವದ ಯೋಜನೆಗಳನ್ನು ಹಾಕಿಕೊಂಡಿದ್ದಳು; ಸಿಕ್ಕ ಬಿಡಿ ನಾಣ್ಯಗಳೆಲ್ಲವನ್ನೂ ಪೆಪ್ಪರ್‌ಮೆಂಟುಗಳು,ಆಟದ ಸಾಮಾನುಗಳು, ಬೆಲೂನುಗಳು ಮುಂತಾದುಗಳ ಬಗ್ಗೆ

ಇದ್ದ ಎಲ್ಲಾ ಆಕರ್ಷಣೆಯನ್ನೂ ತಡೆದುಕೊಂಡು, ಜಿಪುಣತನದಿಂದ ಉಳಿಸಿದ್ದಳು. ಹೀಗೆ ಒಟ್ಟು ಅರವತ್ತು ಪೈಸೆಯನ್ನು ಉಳಿಸಿದ್ದಳು. ಅದರಲ್ಲೂ ಮುಖ್ಯವಾಗಿ ಹಳ್ಳಿಯ ಸಂತೆಯ ದಿನ ಅವಳು ತನ್ನ ಬಳಿ ಹಣ ಇದ್ದಾಗ್ಯೂ ಮೆರ್ರೀ-ಗೋ-ರೌಂಡಲ್ಲಿ ಸವಾರಿ ಮಾಡಬೇಕೆಂಬ ಬಲವಾದ ಆಸೆಯನ್ನು ಸಹ ದೃಢನಿಶ್ಚಯದಿಂದ ತಡೆಹಿಡಿದಿದ್ದಳು.

ಸಾಕಷ್ಟು ಹಣವನ್ನು ಉಳಿಸಿದ ಮೇಲೆ ಅವಳ ಮುಂದಿನ ಸಮಸ್ಯೆ, ತನ್ನ ತಾಯಿಗೆ ಗೊತ್ತಾಗದಂತೆ ಹೇಗೆ ಮನೆಯಿಂದ ನುಣಿಚಿಕೊಳ್ಳುವುದು ಎಂಬುದಾಗಿತ್ತು.

ಪ್ರತಿದಿನ ಊಟವಾದ ಮೇಲೆ ಅವಳ ತಾಯಿ ಸುಮಾರು ಒಂದರಿಂದ ನಾಲ್ಕು ಗಂಟೆ ನಿದ್ರೆ ಮಾಡುತ್ತಿದ್ದರು. ಆದ್ದರಿಂದ ಕೆಲಸ ಸುಲಭವಾಯಿತು. ವಳ್ಳಿ ಯಾವಾಗಲೂ ಈ ಸಮಯವನ್ನು ತನ್ನ ವಿಹಾರಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದಳು ಅಥವಾ ತನ್ನ ಮನೆ ಬಾಗಿಲಿನಿಂದ ನೋಡುತ್ತಾ ನಿಂತಿರುತ್ತಿದ್ದಳು. ಕೆಲವು ವೇಳೆ ಹಳ್ಳಿಯಿಂದ ಹೋಗಲು ಕೂಡಾ ಧೈರ್ಯ ಮಾಡುತ್ತಿದ್ದಳು. ಈ ದಿನ ಅದೇ ಸಮಯವನ್ನು ಹಳ್ಳಿಯ ಹೊರಗಿನ ಮೊದಲ ವಿಹಾರಕ್ಕೆ ಉಪಯೋಗಿಸಿಕೊಂಡಿದ್ದಳು.

ಬಸ್ ಮುಂದೆ ಹೋಗುತ್ತಿತ್ತು.

ಪ್ರಕೃತಿ ಸೌಂದರ್ಯವನ್ನು ದಾಟಿ ಒಂದು ಸಣ್ಣ ಹಳ್ಳಿ ಮುಖಾಂತರ ಅಥವಾ ವಿಲಕ್ಷಣವಾದ ರಸ್ತೆ ಪಕ್ಕದ ಅಂಗಡಿ ಮುಖಾಂತರ ನುಗ್ಗಿ ಹೋಗುತ್ತಿತ್ತು. ಕೆಲವು ವೇಳೆ ಅದರ ಕಡೆ ಬರುತ್ತಿರುವ ಇತರ ವಾಹನಗಳು ಅಥವಾ ರಸ್ತೆಯನ್ನು ದಾಟುತ್ತಿರುವ ಪಾದಚಾರಿಗಳನ್ನು ಬಸ್ ನುಂಗಿಬಿಡುವುದೇನೋ ಅನ್ನಿಸುತ್ತಿತ್ತು. ಆದರೆ ಹೇಗೋ ಅದು ಎಲ್ಲಾ ಅಡ್ಡಿ ಆತಂಕಗಳನ್ನೂ ಸುರಕ್ಷಿತವಾಗಿ, ಹಿಂದಕ್ಕೆ ಬಿಟ್ಟು, ಸುಸೂತ್ರವಾಗಿ ಹೋಗುತ್ತಿತ್ತು. ಮರಗಳು ಅದರ ಕಡೆ ಓಡಿ ಬರುತ್ತಿದ್ದುವು. ಬಸ್ ಅವುಗಳ ಹತ್ತಿರ ಬರುತ್ತಲೇ ಅವು ನಿಲ್ಲುತ್ತಿದ್ದವು. ಬೇರೆ ದಿಕ್ಕಿನಲ್ಲಿ ನುಗ್ಗಿ ಹೋಗುವ ಮುನ್ನ ಕ್ಷಣಕಾಲ ಅವು ರಸ್ತೆಯ ಪಕ್ಕದಲ್ಲಿ ಅಸಹಾಯಕವಾಗಿ ಹಾಗೇ ನಿಲ್ಲುತ್ತಿದ್ದುವು.

ಕೂಡಲೆ ವಳ್ಳಿ ಸಂತೋಷದಿಂದ ಚಪ್ಪಾಳೆ ತಟ್ಟಿದಳು. ನೇರವಾಗಿ ಬಸ್ ಎದುರಿಗೆ ಒಂದು ಚಿಕ್ಕ ಹಸು ಗಾಳಿಯಲ್ಲಿ ಬಾಲವನ್ನು ಮೇಲೆತ್ತಿಕೊಂಡು, ತುಂಬಾ ವೇಗವಾಗಿ ಓಡುತ್ತಿತ್ತು. ಬಸ್ಸು ನಿಂತಿತ್ತು. ಮತ್ತೆ ಮತ್ತೆ ಬಸ್ ಚಾಲಕ ಜೋರಾಗಿ ಹಾರನ್ ಶಬ್ದ ಮಾಡಿದನು. ಆದರೆ, ಹಾರನ್ ಶಬ್ದವನ್ನು ಅವನು ಹೆಚ್ಚಿಸಿದಂತೆಲ್ಲಾ, ಅದು ಇನ್ನೂ ಹೆದರಿ ಬಸ್ ಮುಂದೆವೇಗವಾಗಿ ನಾಗಾಲೋಟ ಮಾಡಿತು.

ಇದು ವಳ್ಳಿಗೆ ತಮಾಷೆಯೆನಿಸಿತು. ಅವಳು ತನ್ನ ಕಣ್ಣುಗಳಲ್ಲಿ ಕಣ್ಣೀರು ಬರುವವರೆಗೂ ನಗುತ್ತಲೇ ಇದ್ದಳು.

'ಓ ಮೇಡಂ, ನಕ್ಕು ಸಾಕಾಗಲಿಲ್ಲವೆ? ನಾಳೆಗೂ ಸ್ವಲ್ಪ ಉಳಿಸಿಕೊಳ್ಳಿ' ಎಂದನು.

ಕೊನೆಗೆ ಹಸು ರಸ್ತೆಯ ಪಕ್ಕಕ್ಕೆ ಹೋಯಿತು. ಬಸ್ ರೈಲು ರಸ್ತೆ ದಾಟುವ ಜಾಗಕ್ಕೆ ಬಂತು. ದೂರದಿಂದ ರೈಲನ್ನು ಒಂದು ಚುಕ್ಕಿಯಂತೆ ನೋಡಬಹುದಿತ್ತು, ಅದು ಹತ್ತಿರ ಬಂದಂತೆಲ್ಲಾ ದೊಡ್ಡದಾಗಿ ಬೆಳೆಯುತ್ತಿತ್ತು. ಆಮೇಲೆ ಅದು ಭಯಂಕರವಾಗಿ ಭೋರಿಡುತ್ತಾ ಬಸ್ಸನ್ನು ನಡುಗಿಸುತ್ತಾ ಗೇಟನ್ನು ಹಾದು ನುಗ್ಗಿಹೋಯಿತು. ಅಲ್ಲಿಂದ ಅದು ಒಂದು ಅಂಗಡಿ ಬೀದಿಯಲ್ಲಿ ಸಂಚರಿಸಿತು. ಮತ್ತೆ ತಿರುಗಿಕೊಂಡು ಒಂದು ದೊಡ್ಡದಾದ ಬೀದಿಯನ್ನು ಪ್ರವೇಶಿಸಿತು. ಅಷ್ಟು ದೊಡ್ಡ ಎದ್ದು ಕಾಣಿಸುತ್ತಿದ್ದ ಅಂಗಡಿಗಳು! ಎಷ್ಟು ಥಳಥಳಿಸುವ ಬಟ್ಟೆಗಳು, ವಿವಿಧ ಸಾಮಾನುಗಳ ಪ್ರದರ್ಶನ! ಎಷ್ಟೊಂದು ಜನಜಂಗುಳಿ!

ಆಶ್ಚರ್ಯದಿಂದ ಮೂಕಳಾಗಿ, ವಳ್ಳಿ ಪ್ರತಿಯೊಂದನ್ನೂ ಬಿಟ್ಟಬಾಯಿ ಬಿಟ್ಟಂತೆ ನೋಡಿದಳು. ಆಮೇಲೆ ಬಸ್ ನಿಂತಿತು. ವಳ್ಳಿಯನ್ನು ಬಿಟ್ಟು ಎಲ್ಲರೂ ಇಳಿದರು.

'ಓ ಮೇಡಂ', ನೀವು ಇಳಿಯವುದಿಲ್ಲೇನು? ನಿಮ್ಮ ಮೂವತ್ತು ಪೈಸೆ ಇಲ್ಲಿ ವರೆಗಷ್ಟೆ' ಎಂದು ಕಂಡಕ್ಟರ್ ಹೇಳಿದ.'ಇಲ್ಲ' ವಳ್ಳಿ ಹೇಳಿದಳು, 'ನಾನು ಇದೇ ಬಸ್‌ನಲ್ಲಿ ವಾಪಸ್ಸು ಹೋಗುತ್ತಿದ್ದೇನೆ' ಅವಳು ಇನ್ನೊಂದು ಮೂವತ್ತು ಪೈಸೆಯನ್ನು ತನ್ನ ಜೇಬಿನಿಂದ ತೆಗೆದು ಕಂಡಕ್ಟರ್‌ಗೆ ಕೊಟ್ಟಳು.

'ಏಕೆ ಏನು ಸಮಾಚಾರ?'

'ಇಲ್ಲ, ಏನೂ ಇಲ್ಲ, ನಾನು ಸುಮ್ಮನೆ ಬಸ್‌ನಲ್ಲಿ ಸವಾರಿ ಮಾಡಬೇಕೆಂದುಕೊಂಡೆ, ಅಷ್ಟೆ'.



'ಈಗ ನೀನು ಇಲ್ಲಿನ ದೃಶ್ಯಗಳನ್ನು ನೋಡಲು ಇಷ್ಟಪಡುವುದಿಲ್ಲವೇ?

'ನಾನೊಬ್ಬಳೇ? ಓ, ನನಗೆ ತುಂಬಾ ಹೆದರಿಕೆ'.

ಹುಡುಗಿಯು ಮಾತನಾಡುವ ರೀತಿಯನ್ನು ನೋಡಿ ವಿನೋದಿಂದ ಕಂಡಕ್ಟರ್ ಹೇಳಿದ, 'ಆದರೆ, ನಿನಗೆ ಬಸ್‌ನಲ್ಲಿ ಬರಲು ಹೆದರಿಕೆಯಾಗಲಿಲ್ಲ'.

'ಆ ಬಗ್ಗೆ ಹೆದರಲು ಏನೂ ಕಾರಣಗಳಿರಲಿಲ್ಲ' ಅವಳು ಉತ್ತರ ಕೊಟ್ಟಳು.

'ಇರಲಿ, ಅಲ್ಲಿರುವ ಅಂಗಡಿಗೆ ಹೋಗಿ ಏನಾದರೂ ಕುಡಿಯಲಿಕ್ಕೆ ಏಕೆ ತೆಗೆದುಕೊಳ್ಳಬಾರದು? ಆ ಬಗ್ಗೆ ಕೂಡಾ ಹೆದರಲು ಕಾರಣವೇನೂ ಇಲ್ಲವಲ್ಲಾ.'

'ಓ, ಇಲ್ಲ, ನಾನು ಅದನ್ನು ಮಾಡಲಾರೆ'.

'ಒಳ್ಳೆಯದು, ಹಾಗಾದರೆ ನಿನಗೆ ಒಂದು ತಂಪು ಪಾನೀಯವನ್ನು ತಂದು ಕೊಡುವೆ'.

'ಬೇಡ ನನ್ನಲ್ಲಿ ಸಾಕಷ್ಟು ಹಣ ಇಲ್ಲ, ನನ್ನ ಟಿಕೆಟ್ ಮಾತ್ರ ಕೊಡಿ, ಅಷ್ಟೆ'.

'ಅದು ನನ್ನ ಅತಿಥ್ಯ, ನಿನಗಾಗಿ ಏನೂ ಖರ್ಚಾಗುವುದಿಲ್ಲ'.

'ಬೇಡ ಬೇಡ' ಅವಳು ಕೊನೆಗೆ ಹೇಳಿದಳು, 'ದಯವಿಟ್ಟು ಬೇಡ'.

ಕಂಡಕ್ಟರ್ ಅಸಹಾಯಕತೆಯಿಂದ ಭುಜ ಹಾರಿಸುತ್ತಾ ಬಸ್ ಇಳಿದು ಹೋದ. ವಳ್ಳಿ ವಾಪಸು ಪ್ರಯಾಣ ಮಾಡುವ ಸಮಯಕ್ಕಾಗಿ ಕಾಯುತ್ತಿದ್ದಳು. ಅಲ್ಲಿ ಹೆಚ್ಚು ಪ್ರಯಾಣಿಕರು ಇರಲಿಲ್ಲ.

'ನಿಮ್ಮ ತಾಯಿ ನಿನಗಾಗಿ ಹುಡುಕುವುದಿಲ್ಲವೇ?' ಕಂಡಕ್ಟರ್ ಅವಳಿಗೆ ಟಿಕೆಟ್ ಕೊಡುವಾಗ ಕೇಳಿದನು.

'ಇಲ್ಲ, ನನಗಾಗಿ ಯಾರೂ ಹುಡುಕುವುದಿಲ್ಲ', ವಳ್ಳಿ ಉತ್ತರಿಸಿದಳು.ಬಸ್ ಹೊರಟಿತು, ಪುನಃ ಅದೇ ಆಶ್ಚರ್ಯಕರವಾದ ದೃಶ್ಯಗಳು. ವಳ್ಳಿ ಸ್ವಲ್ಪವೂ ಬೇಸರಗೊಂಡಿರಲಿಲ್ಲ. ಮೊದಲನೆಯ ಬಾರಿಯಂತೆಯೇ ಎಲ್ಲವನ್ನೂ ಅಷ್ಟೇ ಉತ್ಸಾಹದಿಂದ ನೋಡುತ್ತಿದ್ದಳು.ಆದರೆ, ಅಲ್ಲೊಂದು ಹಸು ರಸ್ತೆಯ ಪಕ್ಕದಲ್ಲಿ ವಾಹನಕ್ಕೆ ಸಿಕ್ಕಿ ಸತ್ತು ಬಿದ್ದಿತ್ತು.

'ನಾವು ಪಟ್ಟಣಕ್ಕೆ ಪ್ರಯಾಣ ಮಾಡುತ್ತಿದ್ದಾಗ ನಮ್ಮ ಬಸ್ ಮುಂದೆ ಓಡಿತ್ತಲ್ಲಾ, ಅದೇ ಹಸುವೇ?' ಅವಳು ಕಂಡಕ್ಟರನನ್ನು ಕೇಳಿದಳು.

ಕಂಡಕ್ಟರ್ ತಲೆಯಾಡಿಸಿದನು. ಅವಳು ದುಃಖಗೊಂಡಳು. ಸ್ವಲ್ಪ ಹೊತ್ತಿನಲ್ಲಿ ಅಷ್ಟು ಮುದ್ದಾಗಿ, ಸುಂದರವಾಗಿ ಇದ್ದ ಪ್ರಾಣಿ ಈಗ ಕೂಡಲೇ ತನ್ನ ಸೌಂದರ್ಯ ಮತ್ತು ಜೀವ ಕಳೆದುಕೊಂಡು, ಕಾಲುಗಳನ್ನು ಅಗಲವಾಗಿ ಹರಡಿಕೊಂಡು, ನೆಟ್ಟ ದೃಷ್ಟಿಯಲ್ಲಿ ನಿರ್ಜೀವ ಕಣ್ಣುಗಳಿಂದ ದುರುಗುಟ್ಟಿಕೊಂಡು ನೋಡುತ್ತಾ, ರಕ್ತಮಯವಾಗಿ ಬಿದ್ದಿರುವುದು ತುಂಬಾ ಭಯಂಕರವಾಗಿತ್ತು.

ಬಸ್ ಮುಂದೆ ಚಲಿಸಿತು, ಆ ಸತ್ತ ಹಸುವಿನ ಜ್ಞಾಪಕ ಎಡೆಬಿಡದೆ ಅವಳ ಉತ್ಸಾಹವನ್ನು ತಣ್ಣಗಾಗಿಸುತ್ತಾ, ಕಾಡುತ್ತಿತ್ತು. ಅವಳಿಗೆ ಕಿಟಕಿಯಿಂದ ನೋಡಲು

ಇನ್ನು ಇಷ್ಟವಿರಲಿಲ್ಲ.

ತನ್ನ ಆಸನಕ್ಕೆ ಅಂಟಿಕೊಂಡು ಕುಳಿತಳು, ಬಸ್ಸು ತನ್ನ ಹಳ್ಳಿಯನ್ನು ಮೂರು ನಲ್ವತ್ತಕ್ಕೆ ಮುಟ್ಟಿತು. ಎದ್ದು ಮೈ ಕೈ ಕೊಡವಿಕೊಂಡು ಇಳಿಯಲು ಸಿದ್ಧಳಾದಳು. ಆಮೇಲೆ ಅವಳು ಕಂಡಕ್ಟರ್ ಕಡೆ ತಿರುಗಿ ಹೇಳಿದಳು– 'ಮತ್ತೆ ಸಿಗೋಣ'.

'ಆಗಲಿ ಮೇಡಂ', ನಗುತ್ತಾ ಉತ್ತರ ಕೊಟ್ಟನು. 'ನಿನಗೆ ಬಸ್ ಸವಾರಿ ಮಾಡಬೇಕೆಂದು ಆಸೆಯಾದಾಗಲೆಲ್ಲಾ ಬಂದು ನಮ್ಮೊಡನೆ ಸೇರಿಕೋ, ಮತ್ತೆ ನಿನ್ನ ಪ್ರಯಾಣದ ಬಾಡಿಗೆಯನ್ನು ತರಲು ಮರೆಯಬೇಡ'.

ಅವಳು ನಕ್ಕು ಬಸ್‌ನಿಂದ ಕೆಳಗೆ ಜಿಗಿದಳು. ಆಮೇಲೆ ನೇರವಾಗಿ ಮನೆ ಕಡೆ ಓಡುತ್ತಾ ಹೋದಳು.

ಅವಳು ಮನೆ ಪ್ರವೇಶಿಸಿದಾಗ, ಅವಳ ಅಮ್ಮ ಎದ್ದು ಸೌತ್ ಸ್ಟ್ರೀಟ್‌ನಲ್ಲಿರುವ ವಳ್ಳಿಯ ಚಿಕ್ಕಮ್ಮಂದಿರುಗಳಲ್ಲಿ ಒಬ್ಬರೊಡನೆ ಮಾತನಾಡುತ್ತಿರುವುದನ್ನು ನೋಡಿದಳು. ಚಿಕ್ಕಮ್ಮ ನಿಜವಾಗಿಯೂ ಹರಟೆಯ ಮಲ್ಲಿ, ಮಾತಾಡಲು ಪ್ರಾರಂಭಿಸಿದರೆ ಒಂದು ಬಾರಿಯೂ ಬಾಯನ್ನು ಮುಚ್ಚುತ್ತಿರಲಿಲ್ಲ.

ವಳ್ಳಿ ಒಳಗೆ ಬಂದಾಗ, ಚಿಕ್ಕಮ್ಮ ಕೇಳಿದಳು'ಎಲ್ಲಿಗೆ ಹೋಗಿದ್ದೆ?' ಅವಳು ಉತ್ತರವನ್ನು ಅಪೇಕ್ಷಿಸದೆ ಮಾಮೂಲಿನಂತೆ ಕೇಳಿದಳು. ಆದ್ದರಿಂದ ವಳ್ಳಿ ಹಾಗೇ ನಕ್ಕಳು, ಅವಳ ತಾಯಿ ಹಾಗು ಚಿಕ್ಕಮ್ಮ ತಮ್ಮ ಸಂಭಾಷಣೆಯನ್ನು ಮುಂದುವರಿಸಿದರು.

'ಹೌದು, ನೀನು ಹೇಳಿದ್ದು ಸರಿ, ನಮ್ಮ ಸುತ್ತಮುತ್ತ ಹೊರ ಪ್ರಪಂಚದಲ್ಲಿ ನಮಗೆ ತಿಳಿಯದ ಅನೇಕ ವಿಷಯಗಳಿವೆ. ನಾನು ಹೇಗೆ ಅವನ್ನೆಲ್ಲಾ ತಿಳಿದುಕೊಳ್ಳಲು ಸಾಧ್ಯ? ಕೆಲವು ವಿಷಯಗಳ ಬಗ್ಗೆ ಗೊತ್ತಿದ್ದಾಗ್ಯೂ ಕೂಡ, ಎಷ್ಟೋ ವೇಳೆ ಅವು ಪೂರ್ತಿಯಾಗಿ ಅರ್ಥವಾಗುವುದಿಲ್ಲ, ಅಲ್ಲವೆ?'

'ಖಂಡಿತ', ಎಂದು ವಳ್ಳಿ ಉಸುರಿದಳು.

'ಏನು ನೀನೇನು ಹೇಳಿದೆ?'

'ಓ' ವಳ್ಳಿ ಹೇಳಿದಳು, 'ನಮಗೆ ಗೊತ್ತಾಗದಂತೆ ನಡೆಯುತ್ತಿರುವ ವಸ್ತುಗಳ ಬಗ್ಗೆ ನೀನೇನು ಹೇಳಿದೆಯೋ ಅದನ್ನು ಹಾಗೇ ಒಪ್ಪಿಕೊಳ್ಳುತ್ತೇನೆ'.

'ಇವಳಿನ್ನೂ ಎಳೆಯ ಮಗುವಿನ ಹಾಗೆ' ಚಿಕ್ಕಮ್ಮ ಹೇಳಿದಳು, 'ಮತ್ತೆ ನೋಡು, ತಾನೂ ದೊಡ್ಡ ಹೆಂಗಸಿನಂತೆ ನಮ್ಮ ಮಾತಿನಲ್ಲಿ ತಲೆ ಹಾಕುತ್ತಾಳೆ!'

ವಳ್ಳಿ ತನ್ನಷ್ಟಕ್ಕೆ ತಾನೇ ನಕ್ಕು ಅಲ್ಲಿಂದ ಹೊರಟು ಹೋದಳು. ಅವಳು ತನ್ನ ನಗುವನ್ನು ತಾಯಿ ಹಾಗೂ ಚಿಕ್ಕಮ್ಮನಿಗೆ ತೋರಿಸಲು ಬಯಸಲಿಲ್ಲ; ಏಕೆಂದರೆ ಅದರಿಂದ ಯಾವ ಲಾಭವೂ ಇರಲಿಲ್ಲ.

ಚಿತ್ರಗಳು: ಆರ್. ಕೆ. ಲಕ್ಷ್ಮಣ್

ಇಂಡೋನೇಷಿಯಾ

# ತಾತನಿಗೊಂದು ಉಡುಗೊರೆ

ಜುಸ್ರಾನ್ ಸಫಾನೋ

ದೂರ ಪರ್ವತಗಳಲ್ಲಿನ ಒಂದು ಹಳ್ಳಿಯಲ್ಲಿ ಬಕ್ರಿ ಎಂಬ ಹೆಸರಿನ ಒಬ್ಬ ಚಿಕ್ಕ ಹುಡುಗ ಇದ್ದನು. ಅದೊಂದು ಒಂಟಿ ಹಳ್ಳಿ. ತುಂಬಾ ನಿಶ್ಶಬ್ದ ಹಾಗೂ ಶಾಂತವಾಗಿ ಇತ್ತು. ಪರ್ವತಗಳಿದ ವೇಗವಾಗಿ ಹರಿಯುವ ಒಂದು ಹೊಳೆ ಕೆಳಗೆ ಹಳ್ಳಿ ಮುಖಾಂತರ ಹರಿಯುತ್ತಿತ್ತು. ರಾತ್ರಿ ಹೊತ್ತಿನಲ್ಲಿ ಸ್ಪಟಿಕಮಣಿಯಂತೆ ಶುದ್ಧವಾದ ನೀರು ಹರಿಯುತ್ತಿದ್ದಾಗ ಹಳ್ಳಿಯವರು ಅದರ ಕಲರವವನ್ನು ಕೇಳಬಹುದಾಗಿತ್ತು. ಅವರು ಪ್ರತಿ ಬೆಳಗ್ಗೆ, ತಮ್ಮ ಜೀವನದ ಒಂದು ಭಾಗವೇ ಆಗಿದ್ದ ಇನ್ನೊಂದು ಶಬ್ದವನ್ನು ಕೇಳಬಹುದಾಗಿತ್ತು. ಅದು ನದಿಯ ಆಚೆ ಇದ್ದ ಮಸೀದಿಯಲ್ಲಿನ ದೊಡ್ಡ ತಮಟೆಯ ಶಬ್ದ. ಅದರ ಪ್ರತಿಧ್ವನಿ ಮಸೀದಿಯ ಗೋಪುರದಿಂದ ಅವರನ್ನು ಬೆಳಗ್ಗೆಯ ಪ್ರಾರ್ಥನೆಗೆ ಕರೆಯುತ್ತಿತ್ತು.

ಪ್ರತಿದಿನ ಬೆಳಗ್ಗೆ ಹಳ್ಳಿಗೆ ಈ ಕರೆಕೊಡುತ್ತಿದ್ದವರು ಬಕ್ರಿಯ ತಾತ. ಸ್ವರ್ಗವನ್ನೇ ತುಂಬುವಂತೆ ಕಾಣುವ ಗಟ್ಟಿ ಹಾಗೂ ಶಕ್ತಿಶಾಲಿಯಾದ ಧ್ವನಿ ಅವರಿಗಿತ್ತು. ತನ್ನ ಕರ್ತವ್ಯಗಳ ವಿಚಾರದಲ್ಲಿ ತುಂಬಾ ಶ್ರದ್ಧೆ ಇತ್ತು. ಒಂದು ಬೆಳಗ್ಗೆ ಕೂಡಾ ತಪ್ಪುತ್ತಿರಲಿಲ್ಲ. ಆದರೆ, ಈ ದಿನ ಬೆಳಗ್ಗೆ ಮಸೀದಿಯಿಂದ ಆ ಕರೆಯೇ ಕೇಳಿಬರಲಿಲ್ಲ.

ಬಕ್ರಿಗೆ ಇದು ತುಂಬಾ ವಿಚಿತ್ರವೆನಿಸಿತು. ತಾತನಿಗೆ ಏನಾಗಿರಬಹುದೆಂದು ಯೋಚಿಸಲು ಪ್ರಾರಂಭಿಸಿದನು. ತಾತ ಖಾಯಿಲೆ ಬಿದ್ದಿದ್ದಾರೆಯೇ ಅಥವಾ ಇನ್ನೇನಾದರೂ? ಮೊದಲು ತಾನು ಮಸೀದಿಗೆ ಪ್ರಾರ್ಥನೆ ಮಾಡಲು ಹೋಗುವ ಬದಲು ತಾತನ ಮನೆಗೆ ಏನು ಸಮಾಚಾರವೆಂದು ನೋಡಲು ಹೋಗಬೇಕೆಂದು ಬಕ್ರಿ ಯೋಚಿಸಿದನು. ಆದರೆ ಹೇಗೋ ಅವನು ಬೆಳಗಿನಜಾವದ ಪ್ರಾರ್ಥನೆಗೆ ಹೋಗದೆ ದಿನವನ್ನು ಪ್ರಾರಂಭಿಸಲು ಇಷ್ಟಪಡಲಿಲ್ಲ, ತನ್ನ ತಾತನಿಗೆ ಏನಾಗಿದೆ ಎಂಬುದು ಮಸೀದಿಯಲ್ಲಿ ಯಾರಿಗಾದರೂ ಗೊತ್ತಿರಬಹುದು ಎಂದುಕೊಂಡ.

ಮಸೀದಿಯಲ್ಲಿ ಅವನು ಆ ಮುದುಕನಿಗಾಗಿ ಎಲ್ಲೆಲ್ಲಿಯೂ ಹುಡುಕಿದನು. ಆದರೆ ಅವನ ಸುಳಿವೇ ಇರಲಿಲ್ಲ ಮತ್ತು ಅವನು ಎಲ್ಲಿದ್ದಾನೆಂಬುದು ಯಾರಿಗೂ ಗೊತ್ತಿರಲಿಲ್ಲ. ಖಾಯಲೆಯಾಗಿದೆಯೇ? ಹುಡುಗ ಆಶ್ಚರ್ಯಗೊಂಡನು. ಪ್ರಾರ್ಥನೆ ಪ್ರಾರಂಭವಾದಾಗ ಬಕ್ರಿ ತನ್ನ ಯೋಚನೆಗಳನ್ನು ಅಡಗಿಸಿಕೊಂಡು, ಮನಸ್ಸಿನಲ್ಲಿ ಏನನ್ನು ಇಟ್ಟುಕೊಳ್ಳದೆ ಪುನಃ ಪೂರ್ತಿಯಾಗಿ ಪ್ರಾರ್ಥಿಸಬೇಕೆಂದು ಪ್ರಯತ್ನ ಪಟ್ಟನು, ಆದರೆ ಅವನಿನ್ನೂ ಯೋಚಿಸುತ್ತಲೇ ಇದ್ದ.

ಪ್ರಾರ್ಥನೆಯಾದ ಮೇಲೆ ಅವನು ತನ್ನ ತಾತನಿರುವ ಜಾಗಕ್ಕೆ ಹೊರಟನು, ಆದರೆ ಮತ್ತೆ ಯೋಚಿಸುತ್ತಾ ನಿಂತನು. ತಾತನಿಗೆ ಒಂದು ಉಡುಗೊರೆಯನ್ನು ತೆಗೆದುಕೊಂಡು ಹೋಗಬೇಡವೇ? 'ತಾತ ತುಂಬಾ ರುಚಿಕರವಾದ್ದು' ಎಂದು ಇಷ್ಟಪಡುವ ಮನ್‌ಕಾಂಗ್ (muncang) ಕಾಯಿ ಆರಿಸಲು ವರ್ಷದ ಈ ಕಾಲವೇ ಸರಿಯಾದ ಸಮಯವಲ್ಲವೇ? ಹೌದು, ಮೊದಲು ತಾನು ತಾತನಿಗಾಗಿ ಕಾಯಿಯನ್ನು ಆರಿಸಲು ಹೋಗುವೆನು ಎಂದುಕೊಂಡ.

ತುಂಬಾ ರುಚಿಯಾದ ಮನ್‌ಕಾಂಗ್ (muncang) ಬೆಳೆಯುವ 'ನಟ್ ಹಿಲ್ಸ್' ಕಡೆ ಬೆಳಗಿನಜಾವ ಮಂಜಿನಲ್ಲಿ ಆತುರವಾಗಿ ಹೊರಟನು. ಆಗ ಚಳಿಯಿತ್ತು. ಆದರೆ, ಅವನು ಮಸೀದಿಗಾಗಿ ಒಂದು ಬೆಚ್ಚನೆಯ ಶಾಲನ್ನು ಧರಿಸಿದ್ದನು.ಅದನ್ನು ಬಿಗಿಯಾಗಿ ಹೊದ್ದುಕೊಂಡು ಪರ್ವತಗಳ ಕಡೆ ಹೊರಟನು.

'ನಟ್ ಹಿಲ್ಸ್'ನಲ್ಲಿ ಅವನು ತುಂಬಾ ಕಾಯಿಗಳನ್ನು ಆರಿಸಲು ಸಾಧ್ಯವಾದರೆ, ತಾತನಿಗೆ ಎಷ್ಟು ಆಶ್ಚರ್ಯವಾಗುವುದು,ಎಂದು ಹೋಗುತ್ತಾ ಯೋಚಿಸಿದನು. ಸಿಪ್ಪೆಗಳು ತುಂಬಾ ಗಟ್ಟಿಯಾಗಿದ್ದವು, ಮತ್ತೆ ಒಳಗಿನ ಕಾಯಿಯನ್ನು ತಿಂದ ಮೇಲೆ ತಾತ ಮೇಲಿನ ಸಿಪ್ಪೆಯನ್ನು ಸುಂದರವಾದ ಉಂಗುರಗಳನ್ನು, ತಯಾರಿಸಲು ಉಪಯೋಗಿಸಬಹುದು. ಅವನ ತಾತ ತಯಾರಿಸಿದ ಉಂಗುರಗಳು ಸುತ್ತಲಿನ ಹಳ್ಳಿಗಳಲ್ಲಿ ಪ್ರಸಿದ್ಧವಾಗಿವೆ, ಅವುಗಳನ್ನು ಒಂದಕ್ಕೆ ಐವತ್ತು ರೂಪಾಯಿಗಳಂತೆ ಮಾರಲೂ ಸುಲಭವಾಗುತ್ತದೆ. ತನಗೆ ನೂರು ಉಂಗುರಗಳಿಗೆ ಬೇಕಾದಷ್ಟು ಕಾಯಿಗಳನ್ನು ಆರಿಸಲು ಸಾಧ್ಯವಾಗುವುದಾದರೆ, ತಾತ ಎಷ್ಟು ಹಣವನ್ನು ಮಾಡಬಹುದು, ಇದನ್ನು ಯೋಚಿಸಿ ನಿಜವಾಗಿಯೂ ತಾತ ಎಷ್ಟು ಸಂತೋಷಗೊಳ್ಳುವರು ಎಂದರೆ ಮತ್ತೆ ಅವರು, ಎಂದೂ ಖಾಯಿಲೆ ಬೀಳುವುದಿಲ್ಲ, 'ನೋಡೋಣ', ಬಕ್ರಿ ತನಗೆ ತಾನೇ ಹೇಳಿಕೊಂಡನು; 'ಒಂದಕ್ಕೆ ಐವತ್ತರಂತೆ ನೂರು ಉಂಗುರಗಳಿಗೆ ಎಷ್ಟು ಹಣ ಸಿಗುವುದು?' ಎಂದು ತನ್ನ ಬೆರಳುಗಳನ್ನು ಹೊರಗೆ ತೆಗೆದು ಎಣಿಸಲಾರಂಭಿಸಿದನು, ಆದರೆ ಹೇಗೋ ಅವನಿಗೆ ಉತ್ತರ ಸಿಗಲಿಲ್ಲ, ಅವನಿನ್ನೂ ಶಾಲೆಯ ಮೂರನೆ ತರಗತಿಯಲ್ಲಿದ್ದನು, ನಿಜವಾಗಿಯೂ ತಾತ ಸಂತೋಷಗೊಳ್ಳುವರು ಎಂದುಕೊಂಡ.



ಬಕ್ರಿ ಒಂದು ಒಳ್ಳೆಯ ರಾಗವನ್ನು ಶಿಳ್ಳು ಹಾಕಲು ಪ್ರಾರಂಭಿಸಿ ಕೂಡಲೇ ನಿಲ್ಲಿಸಿದನು. ಒಂದುವೇಳೆ ಹಳ್ಳಿಯಿಂದ ಬೇರೆ ಹುಡುಗರು'ನಟ್ ಹಿಲ್ಸ್'ಗೆ ತನಗಿಂತ ಮುಂಚೆ ಹೋಗಿ ನೆಲದ ಮೇಲೆ ಬಿದ್ದ ಎಲ್ಲಾ ಕಾಯಿಗಳನ್ನು ರಾತ್ರಿಯೇ ಕಲೆಹಾಕಿದ್ದರೆ? ಅವನು ಬೇಗ ಬೇಗ ಹೆಜ್ಜೆಹಾಕತೊಡಗಿದ.

ಸೂರ್ಯ ದಿಗಂತದಲ್ಲಿ ಮೇಲಕ್ಕೆ ಏರುತ್ತಾ ಆಕಾಶಕ್ಕೆ ಕೆಂಪು ಬಣ್ಣದಿಂದ ಬಣ್ಣ ಹಾಕುತ್ತಾ ಇದ್ದಾಗ, ಅವನು ನಟ್ ಹಿಲ್ಸ್‌ನ ಬುಡಕ್ಕೆ ಬಂದನು. ತಮ್ಮ ಗೂಡುಗಳಿಗೆ ಹಿಂದಿರುಗುತ್ತಿದ್ದ ನರಿಗಳನ್ನು ಹೆದರಿಸುತ್ತಾ, ಅವನು ಮೇಲೆ ಮೇಲಕ್ಕೆ ಓಡಿದನು. ಬೆಟ್ಟದ ತುದಿಯನ್ನು ಮುಟ್ಟಿ, ಸ್ವಲ್ಪ ಕಾಲ ಉಸಿರಾಡಲು ನಿಂತುಕೊಡನು. ಅಲ್ಲಿಗೆ ತಾನೇ ಮೊದಲು ಬಂದಿದ್ದನ್ನು ತಿಳಿದು, ಅವನು ಸಂತೋಷಗೊಂಡನು, ಯಾರ ಸುಳಿವೂ ಅಲ್ಲಿ ಇರಲಿಲ್ಲ.

ಮನ್‌ಕಾಂಗ್ (muncang) ಮರಗಳ ತೋಪಿನಲ್ಲಿ ನೆಲ ಕಾಯಿಗಳಿಂದ ಮುಚ್ಚಿಹೋಗಿತ್ತು. ಹಿಂದಿನ ರಾತ್ರಿ ಎಂದಿನಂತೆ ಹೆಚ್ಚು ಕಾಯಿಗಳನ್ನು ಬೀಳಿಸುವಂತಹ ಭಾರಿ ಗಾಳಿ ಇತ್ತು. ತನಗೆ ತಾನೇ ಸಂತೋಷವಾಗಿ ಹಾಡಿಕೊಂಡು, ಬಕ್ರಿ ಕಾಯಿಗಳನ್ನು ಕಲೆಹಾಕಲು ಪ್ರಾರಂಭಿಸಿದನು. ಕಾಯಿಗಳನ್ನು ಇಟ್ಟುಕೊಳ್ಳಲು ತನ್ನ ಶಾಲನ್ನು ಚೀಲವನ್ನಾಗಿ ಮಾಡಿಕೊಂಡನು. ಅವನ ಅತ್ಯಂತ ಉತ್ತಮವಾದ ಶಾಲು ಅದಾಗಿತ್ತು. ಮನೆಗೆ ಹೋದ ಮೇಲೆ ಅದನ್ನು ಎಚ್ಚರಿಕೆಯಿಂದ ಸ್ವಚ್ಛಗೊಳಿಸಿದರಾಯಿತೆಂದುಕೊಂಡ.

ಕೂಡಲೇ ಅವನು ಕೆಲವು ಧ್ವನಿಗಳನ್ನು ಕೇಳಿದನು. ಯಾರೋ ಬೆಟ್ಟದ ಮೇಲಕ್ಕೆ ಬರುತ್ತಿದ್ದರು. ಹಳ್ಳಿಯಿಂದ ಇತರ ಹುಡುಗರು ಬಂದಿರಬೇಕೆಂದುಕೊಂಡ. ಅವರನ್ನು ತನ್ನೊಡನೆ ಬರುವಂತೆ ಕರೆಯದೆ, ತಾನು ಇಷ್ಟು ಬೇಗ ಬಂದಿರುವುದನ್ನು ಮತ್ತು ಎಲ್ಲಾ ಬಿದ್ದ ಕಾಯಿಗಳನ್ನೂ ಕಲೆಹಾಕಿ ಕೊಂಡಿರುವುದನ್ನು ಅವರು ನೋಡಿದರೆ, ಕೋಪಿಸಿಕೊಳ್ಳುವರು, ಅಲ್ಲದೆ ತಾನು ಆರಿಸಿಕೊಂಡ ಕಾಯಿಗಳನ್ನು ಕಿತ್ತುಕೊಳ್ಳುವರು. ಅಷ್ಟೆ ಏಕೆ? ತಾನು ಅಷ್ಟು ದುರಾಶೆಯವನಾಗಿದ್ದಕ್ಕೆ ಅವರು ತನ್ನನ್ನು ಹೊಡಯದಿದ್ದರೆ ನನ್ನ ಪುಣ್ಯ.

ಇತರ ಹುಡುಗರು ಅವನನ್ನು ನೋಡುವ ಮೊದಲು ಅವಿತುಕೊಳ್ಳುವುದೊಂದೇ ಅವನಿಗಿದ್ದ ದಾರಿಯಾಗಿತ್ತು. ತೋಪಿನ ಒಂದು ಪಕ್ಕಕ್ಕೆ ಓಡುತ್ತಾ , ಅವನು ಒಂದು ಪೊದೆಯ ಗುಂಪಿನೊಳಗೆ ತೆವಳಿಕೊಂಡು ಹೋದನು. ಸಾಧ್ಯವಾದಷ್ಟು ಮರೆಯಾಗಿ ಅವಿತುಕೊಂಡನು.

ಅವರು ತನ್ನನ್ನು ನೋಡದಿರಲೆಂದು ಪ್ರಾರ್ಥಿಸುತ್ತಾ ಕುಳಿತುಕೊಂಡು ಪೂರಾ ಉಸಿರಾಡುವುದನ್ನೇ ನಿಲ್ಲಿಸಿದ್ದಾನೋ ಎಂಬಂತೆ ಮೌನವಾಗಿದ್ದನು. ಕೂಡಲೇ ಬೆಟ್ಟದ ಮೇಲ್ಗಡೆಯಲ್ಲಿ ಐದು ಹುಡುಗರು ಬಂದಿರುವುದನ್ನು ನೋಡಿದನು. ಎಲ್ಲರೂ ಅವನಿಗಿಂತ ದೊಡ್ಡವರಾಗಿದ್ದರು.

ಹುಡುಗರು ಪೊದೆಯ ತುದಿಯಲ್ಲಿ ನಿಂತುಕೊಂಡು ನೆಲದ ಮೇಲೆ ಸುತ್ತಲೂ ನೋಡಿ ದಿಕ್ಕು ಕಾಣದಂತಾದರು.'ನಾವು ತುಂಬಾ ತಡವಾಗಿ ಬಂದಿದ್ದೇವೆ' ಅವರಲ್ಲಿ ಒಬ್ಬನು ನಿರಾಶೆಯಿಂದ ಹೇಳಿದನು.

'ನೆಲದ ಮೇಲೆ ಒಂದು ಕಾಯಿ ಕೂಡ ಉಳಿದಿಲ್ಲ', ಮತ್ತೊಬ್ಬನು ಹೇಳಿದನು.

ಮೂರನೆಯವನು 'ಮತ್ತೆ ಅಷ್ಟು ದೂರದಿಂದ ಬಂದ ಮೇಲೂ ಎಂತಹ ಕೆಟ್ಟ ಅದೃಷ್ಟ' ಎಂದನು. 'ಯಾರೋ ನಮಗಿಂತ ಇಲ್ಲಿಗೆ ಮೊದಲೇ ಬಂದಿದ್ದಾರೆ', ಎತ್ತರವಾದ ಹುಡುಗ ಹೇಳಿದನು.

ಹೆಚ್ಚು ಕಡಿಮೆ ಎಲ್ಲಾ ಹುಡುಗರೂ ಒಟ್ಟಾಗಿ ಕೂಗಿದರು, 'ಬಕ್ರಿ; ಅವನೇ ಇಲ್ಲಿಗೆ ಬಂದಿರಬೇಕು' ಮತ್ತೊಬ್ಬ ಅಂದ,'ಅವನಂತೂ ಯಾವಾಗಲೂ ಬೆಳಗಾಗುವ ಮೊದಲೇ ಮಸೀದಿಯಲ್ಲಿ ಇರುತ್ತಾನೆ'

ಪೊದೆಯಲ್ಲಿ ಅವಿತುಕೊಂಡಿರುವ ಜಾಗದಿಂದ ಇವೆಲ್ಲವನ್ನು ಕೇಳುತ್ತಾ, ಬಕ್ರಿಗೆ ಹೆಚ್ಚು ಹೆದರಿಕೆಯುಂಟಾಯಿತು. ಇನ್ನೂ ಜೋರಾಗಿ ಪ್ರಾರ್ಥನೆ ಮಾಡಲಾರಂಭಿಸಿದನು.

ಒಂದು ಮರದ ಕೆಳಗೆ ತೇವದಿಂದ ಕೂಡಿದ ಮಂಜಿನ ಹನಿಯನ್ನು ತೋರಿಸುತ್ತಾ ಹುಡುಗರಲ್ಲಿ ಒಬ್ಬ ಹೇಳಿದನು, 'ನೋಡಿಲ್ಲಿ ಪಾದದ ಗುರುತುಗಳು ಇನ್ನೂ ಕಾಣುತ್ತಿವೆ. ಕಾಯಿಗಳನ್ನು ಹೊತ್ತುಕೊಂಡು ಅವನು ಈಗ ತಾನೇ ಈ ಜಾಗವನ್ನು ಬಿಟ್ಟಿರಬೇಕು'.

'ಬೇಗ' ಇನ್ನೊಬ್ಬ ಹೇಳಿದನು, 'ನಾವು ಬೇಗ ಹೊರಟರೆ, ಅವನನ್ನು ಹಿಡಿದು ಅವನಿಂದ ಕಾಯಿಗಳನ್ನು ತೆಗೆದುಕೊಳ್ಳಬಹುದು'.

ತುಂಬಾ ದೊಡ್ಡ ಹುಡುಗ ಯೋಚನಾಪರವಾಗಿ ನೆಲದ ಕಡೆ ದೃಷ್ಟಿಸಿ ನೋಡುತ್ತಾ ಹೇಳಿದನು, 'ಇಲ್ಲ, ಅದು ಚೆನ್ನಾಗಿರುವುದಿಲ್ಲ. ನಾವು ಸೋಮಾರಿಗಳಂತೆ ಹಾಸಿಗೆಯಲ್ಲಿ ನಿದ್ರೆ ಮಾಡುತ್ತಿದ್ದಾಗ, ಅವನು ಅಪ್ಪಟ್ಕೂ ಮಸೀದಿಗೆ ಹೋಗಲು ಸಾಕಷ್ಟು ಬೇಗನೆ ಎದ್ದು, ಇಲ್ಲಿಗೆ ನಮಗಿಂತ ಇನ್ನೂ ಬೇಗ ಬರಲಿಲ್ಲವೇ? ಕಾಯಿಗಳು ಅವನಿಗೆ ಸಿಗಬೇಕಾದ್ದು ನ್ಯಾಯ. ನಾವು ಯಾವುದಕ್ಕೂ ಯೋಗ್ಯರಲ್ಲ. ನಮಗೆ ಕಾಯಿಗಳು ಬೇಕಾದರೆ, ಅವನಿಗಿಂತ ಬೇಗ ಎದ್ದು ಬರುವುದು ಒಳ್ಳೆಯದು.





ಮತ್ತೆ ಬೆಳಗಿನ ಜಾವ ಮಹೀಟಿಗೆ ಹೋಗಲು ಪ್ರಾರಂಭಿಸುವುದು ಕೂಡಾ ನಮಗೆ ಉತ್ತಮ'.

ಇತರ ಹುಡುಗರುಗಳು ಅವನ ಕಡೆ ಕುರಿಗಳಂತೆ ನೋಡಿದರು. ಅವನು ಹೇಳಿದ್ದು ಸರಿಯೆಂದು ಅವರಿಗೆ ಗೊತ್ತಿತ್ತು. ಅವರುಗಳು ಸೋಮಾರಿಗಳಾಗಿರದಿದ್ದಲ್ಲಿ, ಅವರಿಗೆ ಕಾಯಿಗಳು ಸಿಗುತ್ತಿದ್ದುವು. ಒಬ್ಬರಿಗೊಬ್ಬರು ಏನನ್ನೂ ಹೇಳಿಕೊಳ್ಳದೆ ಬೆಟ್ಟದ ಕೆಳಗೆ ನಿಧಾನವಾಗಿ ನಡೆಯುತ್ತಾ, ಹಿಂದಕ್ಕೆ ಹೋಗಲು ಪ್ರಾರಂಭಿಸಿದರು.

ಪೊದೆಗಳಿಂದ ನೋಡುತ್ತಿದ್ದ ಬಕ್ರಿಗೆ, ತುಂಬಾ ಕನಿಕರವುಂಟಾಯಿತು. ತನ್ನ ಪ್ರಾರ್ಥನೆಗೆ ಉತ್ತರ ಸಿಕ್ಕಿತೆಂದು ಅವನು ಕೃತಜ್ಞನಾದನು. ಆ ಹುಡುಗರು ಅವನನ್ನು ನೋಡಿರಲಿಲ್ಲ, ಹುಡುಗರ ಮುಖಗಳ ಮೇಲಿನ ದುಃಖವನ್ನು ನೋಡಿ ಅವನ ಮನಸ್ಸು ಕರುಣೆಯಿಂದ ತುಂಬಿತ್ತು. ಕೂಡಲೆ ಅವನು ಮೇಲಕ್ಕೆ ಎದ್ದು, ಬಂದು ಜೋರಾಗಿ ಕೂಗುತ್ತಾ ಹುಡುಗರ ಹಿಂದೆ ಓಡುತ್ತಾ ಹೋದನು.

ಹುಡುಗರು ನಿಂತುಕೊಂಡು ಬಕ್ರಿ ಕಡೆ ತಿರುಗಿದರು. ಅವನು ಅವರ ಹಿಂದ ಓಡಿ ಬರುತ್ತಿರುವುದನ್ನು ನೋಡಿ ಆಶ್ಚರ್ಯಗೊಂಡರು.

ಅವರನ್ನು ತಲುಪಿದ ಮೇಲೆ ಬಕ್ರಿ ಹೇಳಿದನು, 'ನಾನು ಎಲ್ಲಾ ಕಾಯಿಗಳನ್ನು ತೆಗೆದುಕೊಂಡೆನು, ತಪ್ಪಾಯಿತು. ಇಗೋ, ಇವುಗಳಲ್ಲಿ ಸ್ವಲ್ಪ ನೀವು ತೆಗೆದುಕೊಳ್ಳಿ, ಅಷ್ಟಕ್ಕೂ ನಾವೆಲ್ಲಾ ಒಳ್ಳೆಯ ಸ್ನೇಹಿತರಲ್ಲವೇ, ಸಮನಾಗಿ ಹಂಚಿಕೊಳ್ಳಬೇಕು'.

ಐವರೂ ಅಲ್ಲಿ ಒಮ್ಮೆ ಬಕ್ರಿ ಕಡೆ ಮತ್ತೊಮ್ಮೆ ಒಬ್ಬರನ್ನೊಬ್ಬರು ನೋಡುತ್ತಾ ನಿಂತರು. ಕೊನೆಗೆ ತುಂಬಾ ಎತ್ತರವಾದ ಹುಡುಗ ಹೇಳಿದ 'ನಿನಗೆ ವಂದನೆಗಳು, ಬೇಡ ಬಕ್ರಿ, ಇವೆಲ್ಲಾ ನಿನ್ನ ಕಾಯಿಗಳು, ಏಕೆಂದರೆ ನೀನು ಬೇಗನೆ ಎದ್ದು ಬಂದು ಎಲ್ಲವನ್ನೂ ಕಲೆಹಾಕಿರುವೆ'.

'ಹುಚ್ಚನಂತಾಡಬೇಡ', ಬಕ್ರಿ ಆ ಹುಡುಗನ ಕೈಯ್ಯನ್ನು ಹಿಡಿದುಕೊಂಡು ಉತ್ತರಕೊಟ್ಟನು.'ನೀವು ಇವುಗಳನ್ನು ಖಂಡಿತ ತೆಗೆದುಕೊಳ್ಳಬೇಕು. ನಾನು ಇವುಗಳನ್ನು ತೆಗೆದುಕೊಂಡು ನಮ್ಮ ತಾತನಿಗೆ ಕೊಡಲು ಹೋಗುತ್ತಿದ್ದೆ. ಏಕೆಂದರೆ ಈ ದಿನ ಬೆಳಗ್ಗೆ ಅವರು ಪ್ರಾರ್ಥನೆಗೆ ಕರೆಯನ್ನು ಕೊಡಲಿಲ್ಲ. ಅವರು ಖಾಯಿಲೆ ಇರಬಹುದೆಂದು ಯೋಚಿಸಿದೆ. ನನ್ನ ಭಾಗವನ್ನು ಕೊಟ್ಟರೆ ಮಾತ್ರ ಅವರು ಸಂತೋಷಪಡುವರು'.

'ಹೌದು', ಹುಡುಗರಲ್ಲಿ ಒಬ್ಬನು ಹೇಳಿದನು. 'ಈ ದಿನ ಬೆಳಗ್ಗೆ ಅವರು ಒಬ್ಬ ನೆರೆಯವನೊಡನೆ ಮಾತನಾಡುತ್ತಿದ್ದುದ್ದನ್ನು ನೋಡಿದೆ, ತುಂಬಾ ಶೀತವಾಗಿದೆ ಎಂದು ಹೇಳುತ್ತಿದ್ದುದನ್ನು ಕೇಳಿದೆ. ಕೆಲವು ದಿನಗಳಲ್ಲಿ ಪುನಃ ಮಸೀದಿಗೆ ಹೋಗಲು ಸಾಧ್ಯವಾಗುವುದು'.

ತುಂಬಾ ಎತ್ತರವಾದ ಹುಡುಗ ಹೇಳಿದನು, 'ನಾವು ಹೀಗೆ ಮಾಡೋಣ, ಬಕ್ರಿ ನಮ್ಮೊಡನೆ ತನ್ನ ಕಾಯಿಗಳನ್ನು ಹಂಚಿಕೊಳ್ಳುವನು, ಮತ್ತೆ ನಾವೆಲ್ಲಾ ಹೋಗಿ ಎಲ್ಲವನ್ನೂ ಬಕ್ರಿಯ ತಾತನಿಗೆ ಕೊಡೋಣ. ಆಗ ಅವರು ಬೇಗನೆ ಹುಷಾರಾಗುವರು ಮತ್ತು ಶಕ್ತಿವಂತರಾಗುವರು. ಇಡೀ ಹಳ್ಳಿಯಲ್ಲೇ ಅವರ ಶಕ್ತಿಯುತವಾದ ಧ್ವನಿ ಪ್ರತಿಧ್ವನಿಸಿ ನಮ್ಮನ್ನು ಪ್ರಾರ್ಥನೆಗೆ ಕರೆಯುವುದನ್ನು ನಾವು ಕೇಳಬಹುದು'.

ಎಲ್ಲವೂ ನಿಶ್ಚಯವಾಯಿತು. ಹವಾ ತುಂಬಾ ಚೆನ್ನಾಗಿತ್ತು ಹಾಗೂ ಸ್ವಚ್ಛವಾಗಿತ್ತು. ಹುಡುಗರು ತಮ್ಮ ತೋಳುಗಳನ್ನು ಒಬ್ಬರ ಭುಜದ ಮೇಲೆ ಒಬ್ಬರು ಹಾಕಿಕೊಂಡು ಬೆಟ್ಟದ ಕೆಳಗೆ ಹೊಂಬಿಸಿಲಿನಲ್ಲಿ ಸಂತೋಷವಾಗಿ ಹಾಡುತ್ತಾ, ಬಕ್ರಿಯ ತಾತನ ಮನೆಗೆ ಹೋದರು.

**ಚಿತ್ರಗಳು: ಓಸ್‌ಮನ್ ಎಫೆಂಡಿ**



ಇರಾನ್

# ಕವಿ ಮತ್ತು ಸೂರ್ಯ

## ಸೈರಸ್ ತಹ್‌ಬಾಜ್

*(ಲೇಖಕನ ಟಿಪ್ಪಣಿ: ಈ ಕಥೆಯನ್ನು ಮುಕ್ತಾಯಗೊಳಿಸುವ ಪದ್ಯವನ್ನು ಆಧುನಿಕ ಇರಾನ್ ಪದ್ಯಗಳ ಜನಕನಾದ ನೀಮಾ ಯೂಷಿಜೀ ಬರೆದಿದ್ದಾರೆ.)*

ಆ ಹುಡುಗನಿಗೆ ಎಲ್ಲಕ್ಕಿಂತಾ ಸೂರ್ಯ ಇಷ್ಟ. ಅವನು ಸೂರ್ಯನ ಬೆಳಕಿನಲ್ಲಿ ನೋಡುವನು, ಕೇಳುವನು ಮತ್ತು ಹಾಡುವನು.

ಸೂರ್ಯ ಪ್ರಕಾಶಿಸಿದಾಗ ಮನೆ ಸುಂದರವಾಗಿತ್ತು, ನೀರು ನೀಲಿ ಬಣ್ಣವಾಗಿತ್ತು. ಗಿಡಗಳು ಹಸಿರಾಗಿದ್ದುವು. ಬಂಡೆಗಳು ಬೆಳ್ಳಗಿದ್ದುವು. ಎಲ್ಲಕ್ಕೂ ಅದರದೇ ಸ್ವಂತ ಬಣ್ಣವಿತ್ತು, ಎಲ್ಲವೂ ಸೂರ್ಯನ ಬೆಳಕಿನಲ್ಲಿ ಜೀವಂತವಾಗುತ್ತಿದ್ದುವು.

ಅವನ ಸ್ನೇಹಿತ ಹುಂಜ ಕೂಗಿತ್ತು. ಎಲ್ಲಾ ಜನಗಳು, ಕುರಿಗಳು ಮತ್ತು ಪಕ್ಷಿಗಳು ಕೂಗಿಗೆ ಎದ್ದುವು. ಅವನ ಸ್ನೇಹಿತ ಮೊಲ ತನ್ನ ಉದ್ದವಾದ ಬೆಳ್ಳನೆಯ ಕಿವಿಗಳನ್ನು ಅಳ್ಳಾಡಿಸುತ್ತಾ ಮನೆ ಬಿಟ್ಟು ಕಾಡಿಗೆ ಹೊರಟಿತು. ಹುಡುಗನು ಮುಂದೆ ಓಡಿ ಮೊಲದ ಬೆಚ್ಚನೆಯ ಬೆನ್ನನ್ನು ಸವರುತ್ತಾ, ಅದನ್ನು ಸಂತೋಷದಿಂದ ಗಮನವಿಟ್ಟು ನೋಡುತ್ತಿದ್ದನು.

ಅವನಿಗೆ ಪಕ್ಷಿಗಳು ಇಷ್ಟ. ಅವುಗಳನ್ನು ಹಾಗೂ ಅವುಗಳ ಎಚ್ಚರಗೊಳಿಸುವ ಹಾಡುಗಳನ್ನು ಇಷ್ಟಪಡುತ್ತಾನೆ. ಅವು ಹಾರುವುದನ್ನು ನೋಡಲು ಮತ್ತು ಸೂರ್ಯನಲ್ಲಿ ಅವುಗಳ ರೆಕ್ಕೆಗಳ ಬಣ್ಣವನ್ನು ನೋಡಲು ಇಷ್ಟಪಡುತ್ತಾನೆ.

ಆದರೆ, ಎಲ್ಲಕ್ಕಿಂತ ಹೆಚ್ಚಾಗಿ ಸೂರ್ಯ ಅವನಿಗೆ ಇಷ್ಟ.

ಸೂರ್ಯ ಮುಳುಗಿದ ಮೇಲೆ, ಹುಂಜ ತನ್ನ ಗೂಡಿಗೆ ಹಿಂತಿರುಗಿತು, ಮೊಲ ತನ್ನ ಉದ್ದವಾದ ಕಿವಿಗಳನ್ನು ಹಿಂದಕ್ಕೆ ಮುದುರಿಕೊಂಡು ಕಣ್ಣುಗಳನ್ನು ಮುಚ್ಚಿಕೊಂಡಿತು. ರಾತ್ರಿಯ ಹದ್ದುಗಳು ಹಿಂದಿರುಗಿದವು.

ಸೂರ್ಯ ಮುಳುಗಿದ ಮೇಲೆ, ಕತ್ತಲಾಯಿತು. ಭೂಮಿ ಕಪ್ಪಗಾಯಿತು. ಎಲ್ಲವೂ ಕಪ್ಪು ಬಣ್ಣಕ್ಕೆ ತಿರುಗಿದುವು, ಅತೀ ಕಪ್ಪು. ಹುಡುಗನಿಗೆ ಕತ್ತಲು ಇಷ್ಟವಾಗಲಿಲ್ಲ, ಕತ್ತಲಲ್ಲಿ ಬಣ್ಣಗಳನ್ನು ಗುರುತಿಸಲಾಗುತ್ತಿರಲಿಲ್ಲ. ಕಿವಿಗಳಿಗೆ ಯಾವ ಹಾಡುಗಳೂ ಕೇಳಿಸುತ್ತಿರಲಿಲ್ಲ. ಆದ್ದರಿಂದ ಅವನು ಮಲಗಲು ಹೋದನು.

ಒಂದು ರಾತ್ರಿ ತಾನು ದೊಡ್ಡವನಾದಂತೆ ಮತ್ತು ಎತ್ತರವಾದ ಪರ್ವತಗಳನ್ನು ಹತ್ತಿದಂತೆ ಕನಸನ್ನು ಕಂಡನು. ಆದ್ದರಿಂದ ಅವನು ತುಂಬಾ ಹತ್ತಿರ ಇರುವ ಪರ್ವತವನ್ನು ಹತ್ತಿ ಪುನಃ ಎಂದೂ ಕತ್ತಲಾಗದಂತೆ ತನ್ನ ಕೈಗಳಲ್ಲಿ ಸೂರ್ಯನನ್ನು ಹಿಡಿದುಕೊಂಡು ಮನೆಗೆ ತರುವುದಾಗಿ ನಿಶ್ಚಯಿಸಿದನು.

ಮಾರನೇ ದಿನ ಬೆಳಗ್ಗೆ ಬೇಗ ಅವನು ಮನೆಯಿಂದ ಹೊರಗೆ ಓಡಿದಾಗ ಹುಂಜ ಇನ್ನೂ ಕೂಗುತ್ತಿತ್ತು. ಮೊಲ ಕಣ್ಣುಗಳನ್ನು ತೆರೆಯಿತು. ಹುಡುಗ ಹೊರಟು ಹೋಗಿದ್ದನು.

ಹುಂಜ ಹೇಳಿತು: 'ಅವನೆಲ್ಲಿಗೆ ಹೋಗುತ್ತಿದ್ದ ಎಂಬುದು ತಿಳಿಯುತ್ತಿಲ್ಲ. ಆ ದಾರಿಯಲ್ಲಿ ಹೋದ' ಗುಡ್ಡದ ಕಡೆ ತೋರಿಸಿತು. ಮೊಲ ಹೇಳಿತು 'ನಾವು ಅವನ ಹಿಂದೆ ಹೋಗಬೇಡವೇ? ಅವನನ್ನು ಒಂಟಿಯಾಗಿ ಬಿಡಬಾರದು'.

ಮೊಲ ಓಡಿಯೇ ಓಡಿತು, ಹುಂಜ ಕೂಡಾ ಹಿಂದೆ ಬೀಳದಂತೆ ಉದ್ದಕ್ಕೂ ನೃತ್ಯ ಮಾಡುತ್ತಾ ಓಡಿತು.

ಅವರು ಇವನನ್ನು ಮುಟ್ಟಿದಾಗ ಹುಡುಗ ಆಗ ತಾನೇ ಪರ್ವತದ ಬುಡವನ್ನು ತಲುಪಿದ್ದನು, ತನ್ನ ಸ್ನೇಹಿತರುಗಳನ್ನು ನೋಡಿ ಸಂತೋಷಗೊಂಡು, ನಿಂತುಕೊಂಡನು. ಮೊಲದ ಬೆಚ್ಚನೆಯ ತುಪ್ಪಟವನ್ನು ಅವನು ನೇವರಿಸಿ ಹುಂಜಕ್ಕೆ ಕೈ ಅಲ್ಲಾಡಿಸಿದನು.

ತಾನು ಒಂಟಿಯಾಗಿಲ್ಲವೆಂದು ಹುಡುಗ ಸಂತೋಷಗೊಂಡನು. ಪರ್ವತ ಎತ್ತರವಾಗಿತ್ತು, ತಾನು ತುದಿ ಮುಟ್ಟುವುದರೊಳಗೆ ಸೂರ್ಯ ಹೊರಟು ಹೋಗಬಹುದೆಂದು ಹೆದರಿ, ಬೇಗ ಬೇಗ ನಡೆದನು.

ಹುಂಜಕ್ಕೆ ತುಂಬಾ ಆಯಾಸವಾಯಿತು, ಒಂದು ದೊಡ್ಡ ಬಂಡೆಯ ಮೇಲೆ ಸುಧಾರಿಸಿಕೊಳ್ಳಲು ನಿಂತುಕೊಡಿತು.ಆದರೆ, ಹುಡುಗ ಹಿಂದಕ್ಕೆ ನೋಡಲಿಲ್ಲ. ಆಯಾಸವಾಗಿದೆ ಎಂದು ಯೋಚಿಸುವುದಕ್ಕೂ ಆಗದಷ್ಟು ಆಸಕ್ತಿಯಿಂದ ಅವನಿದ್ದನು.

ಬಿಳಿ ಮೊಲಕ್ಕೆ ರಸ್ತೆ ಗೊತ್ತಿತ್ತು. ತನ್ನ ಬಲವಾದ ಕಾಲುಗಳಿಂದ ಅದು ಅತ್ಯಂತ ಎತ್ತರವಾದ ಬಂಡೆಗಳ ಮೇಲೆ ಹಾರಬಲ್ಲದು ಮತ್ತು ಯಾವ ಎತ್ತರವನ್ನಾದರೂ ಜಿಗಿಯಬಲ್ಲದು. ಆದರೆ ಹುಡುಗನ ಜೊತೆಗಿರಲು ಅದು ನಿಧಾನವಾಗಿ ಹೋಗುತ್ತಿತ್ತು.

ಪರ್ವತವು ಕಾಡಿನಂತೆಯೇ ಇತ್ತು. ಅಲ್ಲಲ್ಲೇ ದೊಡ್ಡ ಬಂಡೆಗಳಿದ್ದುವು. ಚಿಕ್ಕ ಪೊದೆಗಳು, ಎತ್ತರವಾದ ಮರಗಳು, ಅಲ್ಲಲ್ಲಿ ಇದ್ದುವು– ಒಂದೆಡೆ ನೀರು ಮತ್ತೊಂದೆಡೆ ಭೂಮಿ.

ಎಲ್ಲೆಲ್ಲಿಯೂ ಹಸಿರು, ತಿಳಿ ಹಸಿರು, ಕಡು ಹಸಿರು, ದಟ್ಟವಾದ ಹಸಿರು, ಹೊಸ ಹುಲ್ಲಿನ ಹಸಿರು ಬಣ್ಣ; ಮಳೆಯಿಂದ ಶುಚಿಯಾದ ಎಲೆಗಳು ಹಚ್ಚಹಸಿರಾಗಿದ್ದುವು.

ಅಲ್ಲಿ ಇನ್ನೂ ಕೆಲವು ಬಣ್ಣಗಳಿದ್ದುವು–ಕೆಂಪು, ಕಿತ್ತಳೆ, ಹಳದಿ, ನೀಲಿ, ನೇರಳೆ, ಊದಾ ಬಣ್ಣದ ಹೂವುಗಳು, ಮರಗಳು, ಹಾಗೂ ಅನೇಕಾನೇಕ ಎತ್ತರದ

ಮರಗಳು, ತೆಳ್ಳನೆಯ ಪೊದೆಗಳು ಮತ್ತು ದಟ್ಟವಾದ ಪೊದೆಗಳು.

ಯಾವ ಯಾವ ಬಣ್ಣ ಹುಡುಗನಿಗೆ ಗೊತ್ತಾಗುತ್ತಿತ್ತೋ ಅಥವಾ ಗೊತ್ತಾಗುತ್ತಿರಲಿಲ್ಲವೋ- ಅವುಗಳೆಲ್ಲಾ ಅಲ್ಲಿ ಇದ್ದುವು. ಸೂರ್ಯ ಅಲ್ಲಿದ್ದನೆಂಬುದು ಅವನಿಗೆ ಗೊತ್ತಿತ್ತು. ಅವನು ಪರ್ವತದ ತುದಿಯ ಮೇಲೆ ಅವನಿಗಾಗಿ ಕಾಯುತ್ತಿದ್ದನೆಂಬುದೂ ಅವನಿಗೆ ಗೊತ್ತಿತ್ತು.

ಬಿಳಿ ಮೊಲ ಮುಂದೆ ಮುಂದೆ ಓಡುತ್ತಿತ್ತು. ಮೊಲ ಜಿಗಿಯುವುದನ್ನು ನೋಡುತ್ತಾ, ಹಕ್ಕಿಗಳು ಹಾಡುವುದನ್ನು ಕೇಳುವುದರಲ್ಲಿ ಅವನು ತಲ್ಲೀನನಾಗಿದ್ದುದರಿಂದ, ಅವನಿಗೆ ಅವರು ಪರ್ವತದ ತುದಿಯನ್ನು ಸೇರಿರುವುದು ಗೊತ್ತಾಗಲೇ ಇಲ್ಲ. ಕೂಡಲೇ, ರಸ್ತೆ ಇನ್ನು ಮುಂದೆ ಬೆಟ್ಟದ ಮೇಲೆ ಹೋಗದೆ ಇರುವುದನ್ನು ಗಮನಿಸಿದನು. ಅಲ್ಲಿ ಇನ್ನು ಪೊದೆಗಳು ಇರಲಿಲ್ಲ. ಮರಗಳು ಇರಲಿಲ್ಲ, ಎಲ್ಲೆಲ್ಲೂ ಉದ್ದವಾದ ಹಸಿರು ಹುಲ್ಲನ್ನು ಬಿಟ್ಟರೆ ಮತ್ತೇನೂ ಇರಲಿಲ್ಲ, ಅವನ ಸ್ನೇಹಿತ, ಬಿಳಿ ಮೊಲ ಹುಲ್ಲಿನಲ್ಲಿ ಆಟವಾಡುತ್ತಿತ್ತು.

ಹುಡುಗ ನಿಂತುಕೊಂಡು ಆಕಾಶದತ್ತ ನೋಡಿದಾಗ, ಸೂರ್ಯನನ್ನು ಕಂಡನು, ತಾವು ಬಂದ ರಸ್ತೆಯನ್ನು ಹಿಂದಕ್ಕೆ ನೋಡಿದನು. ಮರಗಳನ್ನು ನೋಡಿದನು, ಪೊದೆಗಳು ಹಾಗೂ ಬಂಡೆಗಳನ್ನು ನೋಡಿದನು, ಪರ್ವತದ ಬುಡದಿಂದ ಆಚೆಗೆ ಒಂದು ತೆಳ್ಳನೆಯ ಕಂದು ಬಣ್ಣದ ಗೆರೆಯನ್ನು ನೋಡಿದನು. ಆ ಗೆರೆ ಹಳ್ಳಿಯ ಮನೆಗಳ ಸಾಲಾಗಿತ್ತು. ಕಣ್ಣಿಗೆ ಕಾಣದಷ್ಟು ಚಿಕ್ಕದಾಗಿ ಅವನ ಮನೆ ಕಾಣಿಸಿತು. ಎಲ್ಲಾ ಮನೆಗಳೂ ಮಸುಕಾಗಿ ಕಂಡುವು.

ಹಿಂದಕ್ಕೆ ತಿರುಗುತ್ತಾ, ಉದ್ದವಾದ ಹುಲ್ಲಿನ ಮುಖಾಂತರ ಪರ್ವತದ ತುದಿಗೆ ಹೋಗಿ, ನಿಂತುಕೊಂಡು ಕೆಳಗೆ ನೋಡಿದನು.

ಪಕ್ಕದ ಪರ್ವತದ ಮೇಲೂ ಕೂಡಾ ಮರಗಳು, ಪೊದೆಗಳು ಮತ್ತು ಬಂಡೆಗಳಿದ್ದುವು. ಅವನ ಕೆಳಗೆ, ತುಂಬಾ ದೂರದಲ್ಲಿ, ಮನೆಗಳ ಇನ್ನೊಂದು ಕಂದು ಗೆರೆ ಇತ್ತು: ತನ್ನದ ರಂತೆಯೇ ಇದ್ದ ಹಳ್ಳಿ ಪರ್ವತದ ಆ ಕಡೆ ಪಕ್ಕದಲ್ಲೂ ಇತ್ತು.

ಆದರೆ, ಸೂರ್ಯ ಪರ್ವತದ ತುದಿಯಲ್ಲಿ ಇರಲಿಲ್ಲ.

ಹುಡುಗನು ಉದ್ದನೆಯ ಹುಲ್ಲಿನಲ್ಲಿ ಕುಳಿತುಕೊಂಡು ಯೋಚಿಸಿ ತನ್ನಷ್ಟಕ್ಕೆ ತಾನೇ ಅಂದುಕೊಂಡನು,'ಸೂರ್ಯ ಇಲ್ಲಿ ಇಲ್ಲ, ಅದು ಇಲ್ಲಿ ಇರಲೇ ಇಲ್ಲ. ಯಾವುದೇ ಪರ್ವತಕ್ಕಿಂತ ಸೂರ್ಯ ದೊಡ್ಡದು. ಅದು ನನ್ನನ್ನು ಸ್ವಾಗತಿಸಲು ತುಂಬಾ ದೊಡ್ಡದು. ಅದು ಯಾರನ್ನೂ ಸ್ವಾಗತಿಸುವುದಿಲ್ಲ'.

ಅವನು ಹುಲ್ಲಿನ ಮೇಲೆ ಮಲಗಿಕೊಂಡನು, ಮೊಲ ಅವನ ಪಕ್ಕದಲ್ಲಿ ನಿಂತಿತ್ತು.

ಹುಡುಗನು ತನ್ನ ಬೆರಳುಗಳಿಂದ ಕಣ್ಣುಗಳನ್ನು ಮುಚ್ಚಿಕೊಂಡನು. ಆಮೇಲೆ ತನ್ನ ಬೆರಳುಗಳ ಮಧ್ಯದ ಸಂದಿಯಿಂದ ಆಕಾಶದಲ್ಲಿ ಎತ್ತರದಲ್ಲಿ ಸೂರ್ಯನ ಕಡೆ ನೋಡಿದನು. ಅದು ಅವನ ಕೈಗಳಲ್ಲೇ ಇರುವಂತೆ ಪುನಃ ತುಂಬಾ ಹತ್ತಿರ ಕಾಣಿಸಿತು. ಸೂರ್ಯನಲ್ಲಿ ಅವನು ಮುಂಚೆ ನೋಡಿದ್ದ ಎಲ್ಲಾ ಬಣ್ಣಗಳನ್ನು

ನೋಡಬಹುದಿತ್ತು.

ಸೂರ್ಯ ಕೆಂಪಗಿರುವಂತೆ ಅವನು ನೋಡಿದನು, ಹಳದಿಯಾಗಿರುವುದನ್ನು ನೋಡಿದನು, ಹಸಿರಾಗಿರುವುದನ್ನು ನೋಡಿದನು. ಮರಗಳ ಬಣ್ಣ, ಸುಗ್ಗಿಯ ಕಾಲದ ಎಲೆಗಳ ಬಣ್ಣ, ಹುಲ್ಲಿನ ಮೈದಾನಗಳ ಬಣ್ಣ.

ಸೂರ್ಯನಲ್ಲಿ ಎಲ್ಲಾ ಬಣ್ಣಗಳೂ ಇರುವುದನ್ನು ನೋಡಿದನು.

ತನಗೆ ಗೊತ್ತಿದ್ದ ಎಲ್ಲವೂ ಸೂರ್ಯನಲ್ಲಿದ್ದುವು.

ತನಗೆ ಇಷ್ಟವಾದ್ದೆಲ್ಲವೂ ಸೂರ್ಯನಲ್ಲಿದ್ದವು. ಅವನು ಸೂರ್ಯನೊಡನೆ ಮಾತನಾಡತೊಡಗಿದ, ಸೂರ್ಯ ಹೇಳುವುದನ್ನು ಕೇಳಿದನು.

'ನಾನು ಎಲ್ಲೆಲ್ಲಿಯೂ ಇದ್ದೇನೆ, ಎಲ್ಲೆಲ್ಲಿಯೂ, ಎಲ್ಲದರ ಜೊತೆಗೂ, ಎಲ್ಲದರಲ್ಲಿಯೂ ಮತ್ತು ಎಲ್ಲರಿಗಾಗಿ; ನನ್ನನ್ನು ಯಾರು ಇಷ್ಟಪಡುತ್ತಾರೋ ಅವರು ಎಲ್ಲ ವಸ್ತುವನ್ನೂ, ಎಲ್ಲರನ್ನೂ ಇಷ್ಟಪಡುತ್ತಾರೆ. ಯಾರು ನನ್ನೊಡನೆ ಮಾತನಾಡುತ್ತಾರೋ ಅವರು ಎಲ್ಲ ವಸ್ತುವಿನೊಡನೆ ಹಾಗೂ ಎಲ್ಲರೊಡನೆ ಮಾತನಾಡುತ್ತಾರೆ'.

ಹುಡುಗ ಏನೂ ಹೇಳಲಿಲ್ಲ. ಸೂರ್ಯ ಎಲ್ಲವನ್ನೂ ಹೇಳಿದ.

ಸೂರ್ಯನು ಬೆರಳುಗಳ ಮಧ್ಯದಲ್ಲಿನ ಇಕ್ಕಟ್ಟಾದ ಸಂದಿಯಿಂದ ನುಣಚಿಕೊಂಡನು. ಸೂರ್ಯನ ಕಿರಣ ಅವನ ಮುಖದ ಮೇಲೆ ಹರಡಿತು, ಅವನ ಎದೆಯು ಬೆಚ್ಚಗಾಯಿತು, ಶಾಖವು ಇಡೀ ದೇಹದಲ್ಲಿ ಹರಡಿತ್ತು.

ಅವನು ತನ್ನ ಕಣ್ಣುಗಳಿಂದ ಕೈಗಳನ್ನು ತೆಗೆದು ಎದ್ದು ನಿಂತನು.

ಮೊಲವು ಅವರು ಬಂದ ರಸ್ತೆಯಲ್ಲಿ ಹಿಂದಕ್ಕೆ ಓಡುತ್ತಿತ್ತು. ಮೊಲ ಜೋರಾಗಿ ಓಡಿತು. ಬೇಗನೆ ಅವರಿಗಾಗಿ ಹುಂಜ ಕಾಯುತ್ತಿದ್ದ ಬಂಡೆಯನ್ನು ಮುಟ್ಟಿತು.

ಮೊಲ ಹೇಳಿತು: 'ಸೂರ್ಯ ಹುಡುಗನೊಡನೆ ಮಾತನಾಡಿದನು'. ಆಮೇಲೆ ಆ ಮೊಲ ಉಳಿದ ಎಲ್ಲಾ ಮೊಲಗಳಿಗೂ ಇದನ್ನು ಹೇಳಲು ಓಡಿತು.

ಹುಂಜ ತನ್ನ ರೆಕ್ಕೆಗಳನ್ನು ಹರಡಿತು, ತಲೆಯನ್ನು ಎತ್ತರಕ್ಕೆ ಚಾಚಿ ದೊಡ್ಡದಾದ ಧ್ವನಿಯಲ್ಲಿ, ಸಾಧ್ಯವಾದಷ್ಟು ಜೋರಾಗಿ ಈ ಸುದ್ದಿಯನ್ನು ಪ್ರಸಾರ ಮಾಡಿತು. ಹುಂಜ ಎಲ್ಲಾ ಪಕ್ಷಿಗಳಿಗೂ ಹಾಡಿ ಹೇಳಿತು:'ಸೂರ್ಯನು ಹುಡುಗನೊಡನೆ ಮಾತನಾಡಿದನು, ಸೂರ್ಯನು ಹುಡುಗನೊಡನೆ ಮಾತನಾಡಿದನು'. ಗಾಳಿ ಹುಂಜದ ಧ್ವನಿಯನ್ನು ಎಲ್ಲಾ ಕಡೆಗೂ ಹೊತ್ತುಕೊಂಡು ಹೋಯಿತು, ಆ ಧ್ವನಿ ಎಲ್ಲಾ ಕಡೆಯೂ ಕೇಳಿ ಬಂತು'. ಸೂರ್ಯ ಹುಡುಗನೊಡನೆ ಮಾತನಾಡಿದ, ಸೂರ್ಯ ಹುಡುಗನೊಡನೆ ಮಾತನಾಡಿದ'.

ಎಲ್ಲಾ ಮರಗಳೂ, ಎಲ್ಲಾ ಹುಲ್ಲುಗಳೂ ದನಿಯನ್ನು ಕೇಳಿದವು,

ಎಲ್ಲಾ ಮರಗಳೂ ಪಕ್ಷಿಗಳಿಗೆ ಹೇಳಿದವು,

ಎಲ್ಲಾ ಪಕ್ಷಿಗಳೂ ಬಂಡೆಗಳಿಗೆ ಹೇಳಿದವು.

ಎಲ್ಲ ಬಂಡೆಗಳೂ ನೀರಿಗೆ ಹೇಳಿದವು,

ನೀರು ಭೂಮಿಗೆ. ಹೇಳಿತು.
ಬಳಿಕ ಹುಡುಗನು ಪರ್ವತ ಬಿಟ್ಟು ಮನೆಕಡೆ ಹೊರಟ.
ಅವನಿಗಾಗಿ ಹುಲ್ಲು ದಾರಿ ಮಾಡಿತು,
ಅವನಿಗಾಗಿ ಮರಗಳು ತಲೆಯಲ್ಲಾಡಿಸಿದುವು,
ಅವನಿಗಾಗಿ ಪಕ್ಷಿಗಳು ಹಾಡಿದುವು.

ಈಗ ಅವನಿಗೆ ಮರಗಳ, ಬಂಡೆಗಳ, ಮತ್ತೆ ಎಲ್ಲರ ಭಾಷೆ ಗೊತ್ತಾಯಿತು. ಅವನು ಬೆಳೆದು ದೊಡ್ಡವನಾದ, ಮನುಷ್ಯನಾದ, ತಂದೆಯಾದ, ಪಕ್ಷಿಗಳ ಮಾತುಗಳನ್ನೂ, ಮರಗಳ ಧ್ವನಿಯನ್ನೂ, ಬಂಡೆಗಳ ಉರುಳುವ ಸದ್ದನ್ನೂ ನೀರಿನ ಕಲರವವನ್ನೂ ಬರೆದುಕೊಂಡನು. ಇವುಗಳನ್ನು ಅವನು ಜನಗಳಿಗೆ ಹೇಳಿದನು. ನೀರಿನ ಭಾಷೆ, ಬಂಡೆಗಳ, ಮರಗಳ ಮತ್ತು ಪಕ್ಷಿಗಳ ಭಾಷೆ, ಕವಿತೆಯ ಭಾಷೆ, ಇದೇ ಮಾನವತೆಯ ಭಾಷೆ.

ನಾನು ಅವನ ಪದ್ಯಗಳನ್ನು ನನ್ನ ತಂದೆಯಿಂದ ಕೇಳಿದೆ, ಮತ್ತು ಅವುಗಳನ್ನು ನನ್ನ ಮಗನಿಗೆ ಓದಿದೆ. ಅವನ ಪದ್ಯಗಳಲ್ಲಿ ಇದೂ ಒಂದು. ಬಹಳ ವರ್ಷಗಳ ಹಿಂದೆ ಅವನು ಪರ್ವತದ ತುದಿಯಿಂದ ಕೆಳಗೆ ತೆಗೆದುಕೊಂಡು ಬಂದ ಒಂದು ಪದ್ಯ ಇದು:

ದೂರದ ನದಿಯ ದಡದಲ್ಲಿ
ಬೇಸಿಗೆ ದಿನಗಳಲ್ಲಿ
ಬಿಸಿಲು ಕಾಯಿಸುತ್ತಾ ಮಲಗಿದೆ
ಮುದಿ ಆಮೆಯೊಂದು
ನಿಶ್ಚಿಂತವಾಗಿ.
ಇಲ್ಲಿ ನಾನೊಬ್ಬನೇ ಒಂಟಿ
ಸೂರ್ಯನ ಭೇಟಿಗಾಗಿ
ಆಶೆಯ ಹೊತ್ತು ಕಾಯುತ್ತಿರುವೆನು
ಆದರೂ ಸೂರ್ಯನು
ಮುಖ ತಿರುಗಿಸಿಕೊಂಡಿರುವನು
ದೂರದಾಚೆಯ ನೀರಿನಲಿ.
ಸ್ಪಷ್ಟವಾಗಿದೆ ನನಗೆ, ಎಲ್ಲವೂ ಎಲ್ಲಿಡೆಯಿಂದ...........
ನನ್ನ ಬಂಧನಗಳು
ನನ್ನ ತವಕಗಳು
ದೂರದ ನದಿಯ ದಡದಲ್ಲಿ
ನನ್ನ ಸೂರ್ಯ ಒಂಟಿಯಲ್ಲ.

ಚಿತ್ರಗಳು: ನಿಕ್‌ಜದ್ ನೊಜೌಮಿ

ಜಪಾನ್

# ನರಿಯ ಹುಡುಗ

ನಾನ್‌ಕಿಚಿಕ್ ನಿಮಿ

ಬೆಳದಿಂಗಳಲ್ಲಿ ಏಳು ಜನ ಹುಡುಗರು ಹಳ್ಳಿಗಾಡಿನ ರಸ್ತೆಯಲ್ಲಿ ನಡೆಯುತ್ತಾ ಹೋಗುತ್ತಿದ್ದರು. ಕೆಲವರು ತುಂಬಾ ಚಿಕ್ಕವರಾಗಿದ್ದರು, ಶಾಲೆಗೆ ಕೇವಲ ಒಂದು ವರ್ಷ ಅಥವಾ ಸ್ವಲ್ಪ ಮುಂಚೆ ಹೋಗಲು ಪ್ರಾರಂಭಿಸಿದ್ದರು. ಉಳಿದವರು ಸ್ವಲ್ಪ ದೊಡ್ಡವರಾಗಿದ್ದರು. ತಮ್ಮ ಹಳ್ಳಿಯಿಂದ ಸುಮಾರು ಒಂದು ಮೈಲಿ ಆಚೆಯಿದ್ದ ಪಟ್ಟಣದಲ್ಲಿನ ದೇವರ ರಾತ್ರಿ ಉತ್ಸವಕ್ಕೆ ಹೋಗುವ ದಾರಿಯಲ್ಲಿದ್ದರು.

ಆಕಾಶದಲ್ಲಿ ನೆತ್ತಿಯ ಮೇಲೆ ಚಂದ್ರ ಇದ್ದುದರಿಂದ ನೆಲದ ಮೇಲೆ ಹುಡುಗರುಗಳ ನೆರಳುಗಳು ತುಂಬಾ ಕುಳ್ಳಾಗಿದ್ದುವು, ಹುಡುಗರು ಸಂತಸಗೊಂಡಿದ್ದರು. ಎಷ್ಟು ದೊಡ್ಡ ತಲೆಗಳು ಮತ್ತು ಕುಳ್ಳನೆಯ ಕಾಲುಗಳು ಈ ನೆರಳುಗಳಿಗೆ;ಅವರು ನಕ್ಕರು. ಅವರುಗಳಲ್ಲಿ ಕೆಲವರು, ಕೆಲವು ಹೆಜ್ಜೆ ಓಡಿ, ತಮ್ಮ ನೆರಳುಗಳ ಆಕಾರವನ್ನು ಬದಲಾಯಿಸಲು ಪ್ರಯತ್ನಿಸುತ್ತಿದ್ದರು. ಬೆಳದಿಂಗಳ ರಾತ್ರಿಯಲ್ಲಿ ಹುಡುಗರು ಎಲ್ಲಾ ವಿಧವಾದ ಅತ್ಯಂತ ವಿಚಿತ್ರ ಕಾಲ್ಪನಿಕ ವಿಷಯಗಳನ್ನು ಕಲ್ಪಿಸಿಕೊಳ್ಳುವುದು ಸಹಜವಾಗಿರುತ್ತದೆ.

ಒಂದು ಚಿಕ್ಕ ಬೆಟ್ಟದ ಮುಖಾಂತರ ಆ ರಸ್ತೆ ಮುಂದುವರಿದಿತ್ತು. ಅವರು ಬೆಟ್ಟದ ತುದಿಯನ್ನು ತಲುಪಿದಾಗ, ಉತ್ಸವದ ಅಸ್ಪಷ್ಟ ಸ್ವರಗಳು ಆ ಸುಗ್ಗಿಯ ರಾತ್ರಿಯ ತಣ್ಣನೆಯ ಗಾಳಿಯಲ್ಲಿ ಕೇಳಿಬರುತ್ತಿತ್ತು. ಜೊತೆಗೆ ಕೊಳಲ ದನಿಯೂ ಕೇಳಿಬರುತ್ತಿದ್ದುವು. ಬೇಗ ಬೇಗ ನಡೆಯತೊಡಗಿದರು. ಒಬ್ಬ ಸಣ್ಣ ಹುಡುಗ ಹಿಂದೆ ಬೀಳತೊಡಗಿದ.

'ಬೇಗ, ಬುನ್‌ರೋಕೊ, ಬೇಗ' ಅವನನ್ನು ಕೂಗಿದರು.

ಹುಡುಗ ಬುನ್‌ರೋಕೊ ಉಳಿದವರೊಡನೆ ಸೇರಿಕೊಳ್ಳಬೇಕೆಂದು ನಿಜವಾಗಿಯೂ ತನಗೆ ಸಾಧ್ಯವಾದಷ್ಟು ವೇಗವಾಗಿ ನಡೆಯುತ್ತಿದ್ದನು. ಬೆಳದಿಂಗಳಲ್ಲೂ ಕೂಡಾ ಆ ದೊಡ್ಡ ದೊಡ್ಡ ಕಣ್ಣುಗಳನ್ನುಳ್ಳ ತೆಳ್ಳನೆಯ ಚಿಕ್ಕ ಹುಡುಗ ಸುಂದರವಾಗಿದ್ದ.

'ನನಗೆ ಸಾಧ್ಯವಾದಷ್ಟು ಬೇಗ ಬರುತ್ತಿದ್ದೇನೆ', ಅವನು ಮೆಲ್ಲನೆ ಅಳುವ ಧ್ವನಿಯಲ್ಲಿ ಉತ್ತರಕೊಟ್ಟನು. 'ಆದರೆ ಈ ಚಪ್ಪಲಿಗಳು ನನ್ನ ತಾಯಿಯವು, ನನ್ನವಲ್ಲ.'

ಪಟ್ಟಣ ತಲುಪಿದ ಮೇಲೆ ಅವರು ಮೊದಲು ಮುಖ್ಯ ರಸ್ತೆಯಲ್ಲಿರುವ ಪಾದರಕ್ಷೆಗಳ ಅಂಗಡಿಗೆ ಹೋದರು. ಬುನ್‌ರೋಕೊವಿನ ತಾಯಿ ಅವನಿಗೆ ಒಂದು ಹೊಸ ಜೊತೆಯನ್ನು ಕೊಂಡುಕೊಡುವಂತೆ ಅವರಿಗೆ ಹೇಳಿದ್ದಳು.

ಹುಡುಗರಲ್ಲಿ ತುಂಬಾ ದೊಡ್ಡವನಾದ ಯೋಪಿನೋರಿ ಬುನ್‌ರೋಕೊವಿನ ಭುಜದ ಮೇಲೆ ತನ್ನ ಕೈ ಇಡುತ್ತಾ, ಆ ಅಂಗಡಿಯವನ ಹೆಂಡತಿಯೊಡನೆ ಮಾತನಾಡಿದನು.

'ಕೇಳಜ್ಜಿ, ಇವನು ಪೀಪಾಯಿ ಮಾಡುವ ಸೈರೋಕೊವಿನ ಮಗ. ಇವನಿಗೆ ಸರಿಯಾಗಿ ಆಗುವ ಒಂದು ಜೊತೆ ಪಾದರಕ್ಷೆ ಬೇಕು. ನಿನಗೆ ಆಮೇಲೆ ಹಣ ಕೊಡುವುದಾಗಿ ಇವನ ತಾಯಿ ಹೇಳಿದ್ದಾರೆ'.

ಇತರ ಹುಡುಗರು ಅಂಗಡಿಯವನ ಹೆಂಡತಿ ನೋಡುವಂತೆ ಬುನ್‌ರೋಕೊವನ್ನು ಮುಂದುಗಡೆ ತಳ್ಳಿದರು. ಆ ಪೀಪಾಯಿ ಮಾಡುವವನ ಚಿಕ್ಕ ಮಗ ನೇರವಾಗಿ ನಿಂತುಕೊಂಡನು. ತನ್ನ ದೊಡ್ಡ ಕಣ್ಣುಗಳನ್ನು ಆಗಾಗ್ಗೆ ಪಿಳಗುಟ್ಟಿಸುತ್ತಿದ್ದನು.

ನಗುತ್ತಾ, ಅವಳು ಬೀರುವಿನಿಂದ ಆ ಹುಡುಗನಿಗೆ ಸರಿಹೋಗುವ ಅನೇಕ ಜೊತೆ ಪಾದರಕ್ಷೆಗಳನ್ನು ತೆಗೆದು ಕೆಳಗೆ ಹಾಕಿದಳು, ಹುಡುಗನ ತಂದೆಯೋ ಎಂಬಂತೆ, ಯೋಪಿನೋರಿ ಕೆಳಗೆ ಚಕ್ಕಂಬಕ್ಕಲು ಹಾಕಿಕೊಂಡು ಕುಳಿತುಕೊಂಡ ಬುನ್‌ರೋಕೊವಿನ ಪಾದಗಳ ಮೇಲೆ ಒಂದಾದ ಮೇಲೆ ಒಂದರಂತೆ ಇಟ್ಟು ನೋಡಿದನು. ಬುನ್‌ರೋಕೊ ಅಲ್ಲಾಡದೆ, ಮಾತಾಡದೆ ನಿಂತಿದ್ದ. ಒಬ್ಬನೇ ಮಗನಾಗಿದ್ದುದರಿಂದ, ಅವನು ಮುದ್ದಿನಿಂದ ಹಾಳಾಗಿದ್ದ. ಅವನಿಗಾಗಿ ಅವನ ಕೆಲಸಗಳನ್ನು ಯಾರಾದರೂ ಮಾಡುವುದು ಅಭ್ಯಾಸವಾಗಿಬಿಟ್ಟಿತ್ತು.

ಒಂದು ಜೊತೆ ಪಾದರಕ್ಷೆಗಳನ್ನು ಆರಿಸಿಕೊಂಡದ್ದಾಯಿತು. ಬುನ್‌ರೋಕೊ ತೊಗಲಿನ ಬಾರಿನಲ್ಲಿ ತನ್ನ ಪಾದಗಳನ್ನು ತೂರಿಸುತ್ತಿರುವಷ್ಟರಲ್ಲಿ ಗೂನು ಬೆನ್ನಿನ ಒಬ್ಬ ತುಂಬಾ ವಯಸ್ಸಾದ ಮುದುಕಿ ಆ ಅಂಗಡಿಯೊಳಕ್ಕೆ ಬಂದಳು. ಆ ಹುಡುಗನನ್ನು ಮತ್ತು ಅವನ ಹೊಸ ಪಾದರಕ್ಷೆಗಳನ್ನು ಗಮನಿಸಿ, ಅವಳು ತನ್ನಷ್ಟಕ್ಕೆ ತಾನು ಹುಡುಗರಿಗೆ ಕೇಳಿಸುವಂತೆ ಗೊಣಗಿದಳು.

'ಮಗೂ, ಮಗೂ; ಈ ಮಗು ಯಾರದೋ ಗೊತ್ತಿಲ್ಲ, ರಾತ್ರಿ ಹೊತ್ತಿನಲ್ಲಿ ಮೊದಲನೆಯ ಸಲ ಹೊಸ ಪಾದರಕ್ಷೆ ಧರಿಸಿದರೆ,ಖಂಡಿತ ನರಿ ನಿನ್ನನ್ನು ವಶಪಡಿಸಿಕೊಳ್ಳುವುದು.'

ಕ್ಷಣಕಾಲ ಎಲ್ಲರೂ, ಮೌನವಾಗಿದ್ದರು. ಆ ಹುಡುಗರು ಸುಮ್ಮನೆ ಆ ಮುದುಕಿಯ ಕಡೆ ಹೆದರಿಕೊಂಡವರಂತೆ ದುರುಗುಟ್ಟಿಕೊಂಡು ನೋಡಿದರು. ಆಗ ಯೋಪಿನೋರಿ ಕೂಗಿದನು: 'ಇಲ್ಲ, ಹಾಗಾಗುವುದಿಲ್ಲ'.

'ಇದು ಕೇವಲ ಮೂಢನಂಬಿಕೆ', ಇನ್ನೊಬ್ಬ ಹೇಳಿದನು, ಎಲ್ಲಾ ಒಪ್ಪಿಕೊಂಡು ತಲೆ ಅಲ್ಲಾಡಿಸಿದರು. ಆದಾಗ್ಯೂ ಅವರ ಮುಖಗಳ ಮೇಲೆ ಅಹಿತಕರ ಭಾವವಿತ್ತು.



ಆಮೇಲೆ ಆ ಅಂಗಡಿಯವನ ಹೆಂಡತಿ ಹೇಳಿದಳು, 'ಅದನ್ನು ಹಾಗೇ ನನ್ನಲ್ಲಿ ಬಿಡಿ, ನಾನು ಅದರಲ್ಲಿರುವ ಕೆಟ್ಟ ಶಕ್ತಿಯನ್ನು ಹೋಗಲಾಡಿಸುವೆನು'. ಅವಳು ಬೆಂಕಿ ಕಡ್ಡಿಯನ್ನು ಗೀರುವಂತೆ ಮಾಡಿದಳು. ಬುನ್‌ಕೋಕೋಪಿನ ಪ್ರತಿಯೊಂದು ಹೊಸ ಪಾದರಕ್ಷೆಯನ್ನೂ ಬೆಂಕಿಗೆ ಸ್ವಲ್ಪ ಹಿಡಿದುಕೊಂಡಿರುವಂತೆ ಮಾಡಿದಳು, ಪಾದರಕ್ಷೆಗಳ ಮೇಲೆ ಸ್ವಲ್ಪ ಮಸಿ ಗುರುತು ಆಗಿದೆ. ಈಗ ಇದು ಹೊಸದಲ್ಲ. ಹಳೆಯದಾದಂತಾಯಿತು. ಎಲ್ಲಾ ಸರಿ ಹೋಯಿತು. ಈಗ ಯಾವ ನರಿ ಅಥವಾ ಪೀಡೆ ನಿನ್ನನ್ನು ವಶಪಡಿಸಿಕೊಳ್ಳಲು ಆಗುವುದಿಲ್ಲ.'

ಹುಡುಗರು ಅಂಗಡಿಯನ್ನು ಬಿಟ್ಟು ಬಯಲು ರಂಗಮಂದಿರ ನಿರ್ಮಿಸಿದ್ದ ದೇವಾಲಯದ ಆವರಣಕ್ಕೆ ಹೋಗುವ ದಾರಿಯಲ್ಲಿ ಹೊರಟರು. ಬಹಳ ಮಂದಿ ಹುಡುಗಿಯರು ಪವಿತ್ರ ದೇವ ದೇವತೆಗಳ ನೃತ್ಯವನ್ನು ಮಾಡುತ್ತಿದ್ದರು. ಪ್ರತಿಯೊಬ್ಬ ನೃತ್ಯಗಾತಿಯೂ ಆಶ್ಚರ್ಯಕರವಾದ ವೇಗದಿಂದ ಎರಡು ಬೀಸಣಿಗೆಗಳನ್ನು ತಿರುಗಿಸುತ್ತಿರುವುದನ್ನು ಹತ್ತಿರದಿಂದ ಹುಡುಗರು ನೋಡಿದರು. ಆಗಾಗ್ಗೆ ಹುಡುಗರು ತಮ್ಮ ಕೈಗಳಲ್ಲಿದ್ದ ಕ್ಯಾಂಡಿ ಕಡ್ಡಿಯನ್ನು ಚೀಪಿದರು. ಅವರ ಕಣ್ಣುಗಳು ಮಾತ್ರ ನೃತ್ಯದಲ್ಲಿ ನೆಟ್ಟಿದ್ದವು. ಆ ಹೆಂಗಸರು ಮುಖಕ್ಕೆ ಬೆಳ್ಳನೆಯ ಪೌಡರನ್ನು ದಟ್ಟವಾಗಿ ಬಳಿದುಕೊಂಡಿದ್ದರು. ಅಷ್ಟರಲ್ಲಿ ಆ ನೃತ್ಯಗಾತಿಯರಲ್ಲಿ ತಮ್ಮ ಹಳ್ಳಿಯ ಪಂಪ್

ಮನೆಯಲ್ಲಿ ಕೆಲಸ ಮಾಡುತ್ತಿದ್ದ 'ಟೋನೇಕೋ' ಎಂಬ ಹೆಸರಿನ ಒಬ್ಬ ಹುಡುಗಿಯನ್ನು ಗುರುತಿಸಿದರು.

'ನೋಡು, ನೋಡು', ಆ ಹುಡುಗರು ಒಬ್ಬರೊಡನೊಬ್ಬರು ಪಿಸುಗುಟ್ಟುತ್ತಾ ಹಲ್ಲು ಕಿರಿಯುತ್ತಾ 'ಇವಳು ಅದೇ ಮುದಿ ಟೋನೇಕೋ ಅಲ್ಲವೇ' ಎಂದರು.

ಸ್ವಲ್ಪ ಹೊತ್ತಾದ ಮೇಲೆ ಅವರಿಗೆ ನೃತ್ಯ ನೋಡಿ ಸಾಕಾಯಿತು. ಆದ್ದರಿಂದ ದೇವಾಲಯದ ಆವರಣದ ಕತ್ತಲು ಮೂಲೆಯಲ್ಲಿ ಹಚ್ಚುತ್ತಿದ್ದ ಪಟಾಕಿ ಹಾಗೂ ಬಾಣ ಬಿರುಸುಗಳನ್ನು ನೋಡಲು ಹೊರಟರು. ದೀಪಗಳಿಂದ ಅಲಂಕರಿಸಲ್ಪಟ್ಟ ತೆಪ್ಪದ ಮೇಲೆ ಸೂತ್ರದ ಬೊಂಬೆಯಾಟ ಪ್ರಾರಂಭವಾಯಿತು. ಗುಂಪಿನಲ್ಲಿ ನುಗ್ಗಿ ಹುಡುಗರು ದಾರಿಯನ್ನು ಮಾಡಿಕೊಂಡರು. ಮುಂದುಗಡೆ ನಿಂತು ತೆಪ್ಪದ ಮೇಲೆ ಬಾಲ್ಕನಿಯಂತಹ ವೇದಿಕೆ ಕಡೆ ನೋಡುತ್ತಿದ್ದರು.

ಒಂದು ಬೊಂಬೆ ಕುಣಿಯುತ್ತಿತ್ತು. ಹುಡುಗರು ಅದನ್ನು ನೋಡಿದರು. ಆ ಗೊಂಬೆ ವಯಸ್ಸಾದವರಂತೆಯೂ ಕಾಣಲಿಲ್ಲ ಅಥವಾ ಮಗುವಿನಂತೆಯೂ ಕಾಣಲಿಲ್ಲ, ಅದು ನಿಜವಾದ ಮನುಷ್ಯನಲ್ಲವೆಂದು ನಂಬಲು ಕಷ್ಟವಾಗುವಂತೆ ಅದರ ಕಪ್ಪನೆಯ ಕಣ್ಣುಗಳು ತುಂಬಾ ಪ್ರಕಾಶಮಾನವಾಗಿ ಕಾಣುತ್ತಿದ್ದವು. ಆಗಾಗ್ಗೆ ಆ ಗೊಂಬೆ ಕಣ್ಣು ಮಿಟುಕಿಸುತ್ತಿತ್ತು. ಅದರ ಕಣ್ಣುಗಳು ಮಿಟುಕುವಂತೆ ಮಾಡುತ್ತಿದ್ದವನು ಗೊಂಬೆಯ ಹಿಂದೆ ನಿಂತಿದ್ದ ಗೊಂಬೆಯಾಡಿಸುವವನು ಎಂದು ಹುಡುಗರಿಗೆ ಖಂಡಿತ ಗೊತ್ತಿತ್ತು, ಆದರೆ ಅವರು, ಪ್ರತಿ ಸಲ ಕಣ್ಣುಗಳು ಅಲ್ಲಾಡಿದಾಗ್ಯೂ ಸ್ವಲ್ಪ ಹೆದರಿಕೊಳ್ಳುತ್ತಿದ್ದರು.

ಆಮೇಲೆ ಇದ್ದಕ್ಕಿದ್ದಂತೆ, ಗೊಂಬೆ ತನ್ನ ಬಾಯನ್ನು ತೆಗೆಯಿತು, ಉದ್ದವಾದ ನಾಲಿಗೆಯನ್ನು ಚಾಚಿತು, ಹುಡುಗರು ಆಶ್ಚರ್ಯದಿಂದ ಕಿರಿಚಿದ್ದಕ್ಕೆ ಅದು ಬಾಯಿಯನ್ನು ಪುನಃ ಮುಚ್ಚಿಕೊಂಡಿತು. ಮಿಂಚು ಹೊಳೆಯುವಷ್ಟು ಕಾಲದಲ್ಲಿ ಬೊಂಬೆಯ ಬಾಯಿಯೊಳಗೆ ಪೂರಾ ಕೆಂಪಾಗಿರುವುದನ್ನು ನೋಡಿದರು, ಅದು ಕೂಡಾ ಗೊಂಬೆಯಾಡಿಸುವವನ ಕೆಲಸ ಎಂದು ಅವರು ತಿಳಿದಿದ್ದರು. ಅದು ಬೆಳಗ್ಗೆಯ ಸಮಯವಾಗಿದ್ದಲ್ಲಿ, ಅವರಿಗೆ ನಗು ಬರುತ್ತಿತ್ತು. ಆದರೆ ಈಗ ಯಾರೂ ನಗಲಿಲ್ಲ. ಲಾಂದ್ರಗಳ ಬೆಳಕಿನಲ್ಲಿ ಸುತ್ತಲೂ ಎಲ್ಲಾ ಕಡೆ ವಿಚಿತ್ರವಾದ ನೆರಳುಗಳು ಮೂಡುತ್ತಿದ್ದುವು, ಒಂದು ಗೊಂಬೆ ತನ್ನ ಕಣ್ಣುಗಳನ್ನು ಮಿಟಕಿಸುತ್ತಾ ಕೆಂಪಾದ ಬಾಯಿಯಿಂದ ಕೆಂಪು ಕೆಂಪಾದ ನಾಲಗೆಯನ್ನು ಚಾಚುತ್ತಿತ್ತು. ಅದು ನಿಜವಾಗಿಯೂ ಬದುಕಿರುವಂತೆ ಕಾಣಿಸಿತ್ತು, ಅವರು ಹೆದರಿದರು.

ಅವರು ಬುನ್‌ರೋಕೊವಿನ ಹೊಸ ಪಾದರಕ್ಷೆಗಳು ಮತ್ತು ಆ ಮುದಿ ಹೆಂಗಸು 'ರಾತ್ರಿಯ ಹೊತ್ತಿನಲ್ಲಿ ನೀನು ಹೊಸ ಪಾದರಕ್ಷೆಗಳನ್ನು ಹಾಕಿಕೊಂಡರೆ, ನರಿ ನಿನ್ನನ್ನು ವಶಪಡಿಸಿಕೊಳ್ಳುವುದು' ಎಂದು ಹೇಳಿದ್ದನ್ನು ಜ್ಞಾಪಿಸಿಕೊಳ್ಳುತ್ತಲೇ ಇದ್ದರು. ಉತ್ಸವದಲ್ಲಿ ತಾವು ತುಂಬಾ ಹೊತ್ತು ಇದ್ದವೆಂಬುದನ್ನು ಅರ್ಥಮಾಡಿಕೊಂಡರು. ಪಟಾಕಿಗಳ ಶಬ್ದ ಶಾಂತವಾಗಿತ್ತು, ಜನಜಂಗುಳಿ

ಕಡಿಮೆಯಾಗುತ್ತಿತ್ತು. ಮನೆ ತಲುಪಲು ಬೆಟ್ಟದ ಮೇಲೆ, ಒಂಟಿ ಹಾದಿಯಲ್ಲಿ ಹೊಲಗಳ ಮುಖಾಂತರ ಬಹಳ ದೂರ ಹೋಗಬೇಕೆಂಬುದನ್ನು ಹುಡುಗರು ಜ್ಞಾಪಿಸಿಕೊಂಡರು.

ಅವರು ಮನೆಗೆ ಹೊರಟರು, ಚಂದ್ರ ಇನ್ನೂ ಆಕಾಶದಲ್ಲಿ ಎತ್ತರದಲ್ಲಿ ಪ್ರಕಾಶಿಸುತ್ತಿದ್ದನು. ಆದರೆ, ಮುಂಚಿನ ಉತ್ಸಾಹವೆಲ್ಲಾ ತಣ್ಣಗಾಗಿತ್ತು, ಆ ಬೆಳದಿಂಗಳು ಅವರಿಗೆ ಈಗ ಸಂತೋಷವನ್ನು ಕೊಡುತ್ತಿರಲಿಲ್ಲ. ಪ್ರತಿಯೊಬ್ಬರೂ ತಮ್ಮದೇ ಆದ ಯಾವುದೋ ಪ್ರಪಂಚದಲ್ಲಿರುವಂತೆ ಮೌನವಾಗಿ ನಡೆಯುತ್ತಿದ್ದರು.

ಅವರು ಬೆಟ್ಟದ ತುದಿಯನ್ನು ತಲುಪಿದ ಮೇಲೆ ಹುಡುಗರಲ್ಲಿ ಒಬ್ಬನು ತನ್ನ ಬಾಯಿಯನ್ನು ಕೈಗಳಿಂದ ಮುಚ್ಚಿಕೊಂಡು ತನ್ನ ಹತ್ತಿರದಲ್ಲಿದ್ದ ಇನ್ನೊಬ್ಬ ಹುಡುಗನ ಕಿವಿಯಲ್ಲಿ ಏನನ್ನೋ ಪಿಸುಗುಟ್ಟಿದನು. ಆಮೇಲೆ ಎರಡನೇ ಹುಡುಗ ಮೂರನೇ ಹುಡುಗನಿಗೆ ಪಿಸುಗುಟ್ಟಿದನು, ಬುನ್‌ರೋಕೊವನ್ನು ಬಿಟ್ಟು ಪ್ರತಿಯೊಬ್ಬನಿಗೂ ಆ ಗುಟ್ಟು ತಿಳಿದಿತ್ತು.



ಅವರು ಪಿಸುಗುಟ್ಟುತ್ತಿದ್ದುದು ಈ ರೀತಿಯಾಗಿತ್ತು: 'ಆ ಅಂಗಡಿಯವನ ಹೆಂಡತಿ ಅಷ್ಟಕ್ಕೂ ದುಷ್ಟ ಶಕ್ತಿಯನ್ನು ತೆಗೆದು ಹಾಕಲಿಲ್ಲ, ಅವಳು ಬೆಂಕಿ ಕಡ್ಡಿ ಗೀರಿದಂತೆ ನಟನೆ ಮಾಡಿದಳು.'

ಹುಡುಗರು ಉಸಿರು ಬಿಗಿಹಿಡಿದುಕೊಂಡು ತುಟಕ್ ಪಿಟಕ್ ಎನ್ನದೆ ಮುಂದೆ ನಡೆದರು. ಎಲ್ಲರೂ ಅದೇ ವಿಷಯವನ್ನೇ ಯೋಚಿಸುತ್ತಿದ್ದರು. ನರಿಯ ವಶವಾಗುವುದು ಎಂದರೇನು? ನರಿಯು ಬುನ್‌ರೋಕೊವಿನೊಳಗೆ ಸೇರಿಕೊಳ್ಳುವುದೇ? ಅಥವಾ ಬುನ್‌ರೋಕೊ ಹೊರಗೆ ನೋಡಲು ಹಾಗೇ ಕಾಣಿಸಿದರೂ ಅವನ ಮನಸ್ಸು ನರಿ ಮನಸ್ಸಿನಂತೆ ಬದಲಾಯಿಸುವುದೇ? ಹಾಗಿದ್ದಲ್ಲಿ, ಆಗಲೇ ನರಿ ಬುನ್‌ರೋಕೊನನ್ನು ಹಿಡಿದುಕೊಂಡಿರಬೇಕು. ಆದರೆ ಬುನ್‌ರೋಕೊ ಬಾಯಿಯನ್ನೇ ಬಿಡದಿದ್ದರೆ ನಮಗೆ ಅದು ಹೇಗೆ ಗೊತ್ತಾಗಬೇಕು?.....

ರಸ್ತೆ ಈಗ ಇಳಿಜಾರಾಗಿತ್ತು, ಸಣ್ಣ ಸಣ್ಣ ಹುಲ್ಲು ಬೆಳೆದ ಮೈದಾನದ ಮುಖಾಂತರ ರಸ್ತೆ ಸಾಗುತ್ತಿತ್ತು. ಹುಡುಗರು ಬೇಗ ಬೇಗ ನಡೆಯುತ್ತಿದ್ದರು, ಎಲ್ಲರೂ ಬುನ್‌ರೋಕೊ ಮತ್ತು ನರಿಯ ಬಗ್ಗೆ ಯೋಚಿಸುತ್ತಿದ್ದರು.

ಸುತ್ತಲೂ ಕೆಲವು ತಾಳೆ ಗಿಡಗಳಿದ್ದುವು. ಒಂದು ಸಣ್ಣ ಕೊಳವನ್ನು ದಾಟಬೇಕಾಗಿತ್ತು. ಆ ಕೊಳವನ್ನು ದಾಟುತ್ತಲೇ ಅವರಲ್ಲಿ ಒಬ್ಬನು ಮೆಲ್ಲನೆ ಕೆಮ್ಮಿದನು. ಆ ನಿಶ್ಶಬ್ದದಲ್ಲಿ ಅವರು ಅದನ್ನು ಸ್ಪಷ್ಟವಾಗಿ ಕೇಳಿದರು. ಅವರು ಒಬ್ಬರನ್ನೊಬ್ಬರು ಅನುಮಾನದಿಂದ ನೋಡಿಕೊಂಡರು. ಎಲ್ಲಾ ನಿಶ್ಶಬ್ದವಾಗಿತ್ತು, ಆ ಶಬ್ದ ಬುನ್‌ರೋಕೊವಿನ ಕಡೆಯಿಂದ ಬಂತೆಂದು ನಿಶ್ಚಯಿಸಿದರು.

ಬುನ್‌ರೋಕೊ ಕೆಮ್ಮಿದ್ದಕ್ಕೆ ಏನಾದರೂ ಆಳವಾದ ಅರ್ಥವಿದೆಯೇ? ಆ ಬಗ್ಗೆ ಅವರು ಹೆಚ್ಚು ಯೋಚಿಸಿದಂತೆಲ್ಲಾ, ಅದು ಕೆಮ್ಮೇ ಅಲ್ಲ ಎಂದು ನಂಬಲು ಪ್ರಾರಂಭಿಸಿದರು. ನಿಜವಾಗಿಯೂ ಅದು ನರಿಯ ಕೂಗಿನಂತಹ ಶಬ್ದ ಅನ್ನಿಸಿತು. 'ಅಹಂ' ಅಲ್ಲಿ, ಬುನ್‌ರೋಕೊ ಪುನಃ ಅದೇ ಶಬ್ದ ಮಾಡಿದ್ದಾನೆ.

ಈಗ ಆ ಹುಡುಗರ ಮನಸ್ಸಿನಲ್ಲಿ ಅದರ ಬಗ್ಗೆ ಅನುಮಾನವೇ ಇರಲಿಲ್ಲ: ಅವರುಗಳ ಮಧ್ಯೆ ನಿಜವಾಗಿಯೂ ಒಂದು ನರಿ ಇತ್ತು. ಅವರು ಹೆದರಿಕೊಂಡರು, ಇನ್ನೂ ಬೇಗನೆ ಆತುರವಾಗಿ ಹೊರಟರು.

ಎಲ್ಲಾ ಮನೆಗಳಿಂದ ದೂರ ಸಣ್ಣ ಕಿತ್ತಳೆ ಹಣ್ಣಿನ ತೋಟದ ಒಂದು ಸಣ್ಣ ಕಣಿವೆಯಲ್ಲಿ ಬುನ್‌ರೋಕೊವಿನ ಮನೆಯಿತ್ತು. ಅಲ್ಲಿಗೆ ಹೋಗಲು, ಆ ಚಕ್ರದ ಬಾವಿ ಪಕ್ಕದಲ್ಲಿರುವ ಮುಖ್ಯ ರಸ್ತೆ ಕವಲಾಗುವ ಒಂದು ಸಣ್ಣ ದಾರಿಯನ್ನು ಹಿಡಿಯಬೇಕಾಗಿತ್ತು. ಸಾಧಾರಣವಾಗಿ ಆ ಹುಡುಗರು ಬುನ್‌ರೋಕೊವಿನ ಬಾಗಿಲವರೆಗೆ ಜೊತೆಗೊಡಲು ಹೋಗುತ್ತಿದ್ದರು. ಏಕೆಂದರೆ ಅವನು ಮುದ್ದಿನಿಂದ ಎಷ್ಟು ಅಸಹಾಯಕನಾಗಿ, ಹಾಳಾಗಿದ್ದ ಎಂಬುದು ಅವರಿಗೆ ಗೊತ್ತಿತ್ತು. ಅವನ ತಾಯಿ ತನ್ನ ಚಿಕ್ಕ ಮಗನನ್ನು ನೋಡಿಕೊಳ್ಳುವಂತೆ ಕೇಳಿಕೊಂಡು ಅವರಿಗೆ ಸರಿಯಾಗಿ ಕಿತ್ತಳೆ ಹಣ್ಣುಗಳು ಹಾಗೂ ಸಿಹಿ ತಿಂಡಿಗಳನ್ನು ಕೊಡುತ್ತಿದ್ದಳು. ಅಂದು



ರಾತ್ರಿ ಕೂಡಾ ಅವರು ಬುನ್‌ರೋಕೊವಿನ ಮನೆಗೆ ಹೋಗಿ ಅವನನ್ನು ಉತ್ಸವಕ್ಕೆ ಕರೆದುಕೊಂಡು ಹೋಗುವ ತೊಂದರೆ ತೆಗೆದುಕೊಂಡಿದ್ದರು.

ಈಗ ಆ ಗುಂಪು ಭಕ್ರದ ಬಾವಿಯ ಬಳಿ ತಲುಪಿತು. ಬುನ್‌ರೋಕೊವಿನ ಮನೆ ಎತ್ತರವಾದ ಹುಲ್ಲಿನ ಮೈದಾನದಲ್ಲಿ ಮರೆಯಾಗಿತ್ತು. ಯಾರಿಗೂ ಮುಂದೆ ಹೋಗಲು ಧೈರ್ಯವಾಗಲಿಲ್ಲ. ಸಾಧಾರಣವಾಗಿ ಅವರು ಬುನ್‌ರೋಕೊವನ್ನು ಮನೆಗೆ ಕರೆದುಕೊಂಡು ಹೋಗುತ್ತಿದ್ದರು ಎಂಬುದನ್ನು ಅವರು ಪೂರಾ ಮರೆತಂತೆ ಕಾಣುತ್ತಿತ್ತು. ಆದರೆ ಅವರು ಮರೆತಿರಲಿಲ್ಲ, ಹೆದರಿದ್ದರು.

ಕೊನೆಗೆ ಬುನ್‌ರೋಕೊ ತಾನೇ ರಸ್ತೆಯ ಕಡೆಗೆ ಹೊರಟನು, ಆದರೆ, ಕಡೇ ಪಕ್ಷ ಯೋಷಿನೋರಿ ಆದರೂ ಅವನ ಜೊತೆ ಬರುವನೆಂದು ಆಶಿಸುತ್ತಾ ತಿರುಗಿ ತಿರುಗಿ ನೋಡುತ್ತಿದ್ದನು. ಆದರೆ, ಯೋಷಿನೋರಿ ಕೂಡಾ ಕದಲಲಿಲ್ಲ.

ಬುನ್‌ರೋಕೊ ಒಬ್ಬನೇ, ಬೆಳದಿಂಗಳಿಂದ ಕೂಡಿದ ಕಣಿವೆಯಲ್ಲಿ ದಾರಿ ಹಿಡಿದನು, ಎಲ್ಲೋ ಹತ್ತಿರದಲ್ಲಿ ಕಪ್ಪೆಗಳು ಧ್ವನಿಗೂಡಿಸಿ ವಟಗುಟ್ಟುವ ಶಬ್ದ ಕೇಳಿಬರುತ್ತಿತ್ತು. ಹೆಚ್ಚು ಕಡಿಮೆ ಮನೆಹತ್ತಿರ ಬಂದಿದ್ದನು. ದೊಡ್ಡ ಹುಡುಗರು ತನ್ನೊಡನೆ ಬರಲಿಲ್ಲವೆಂದು ಇನ್ನು ಅವನಿಗೇನೂ ಚಿಂತೆ ಇರಲಿಲ್ಲ, ಅವರು ಜೊತೆ ಇಲ್ಲದೇ ಇದ್ದುದು ಇದೇ ಮೊದಲ ಸಲವಾಗಿತ್ತು. ಬುನ್‌ರೋಕೊ ಚುರುಕಾದ ಹುಡುಗನಾಗುವುದು ತುಂಬಾ ದೂರವಿತ್ತು. ಕಡೇ ಪಕ್ಷ ಏನಾಯಿತು ಎಂಬುದನ್ನು ಅರ್ಥಮಾಡಿಕೊಳ್ಳುವಷ್ಟು ಸೂಕ್ಷ್ಮ ಮನಸ್ಸಿನವನಾಗಿದ್ದನು. ಉಳಿದ ಹುಡುಗರು ಏನು ಪಿಸುಗುಟ್ಟುತ್ತಿದ್ದರು ಮತ್ತು ತಾನು ಕೆಮ್ಮಿದಾಗ ಅವರು ಹೇಗೆ

ಉತ್ಸವಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿ ಎಲ್ಲರೂ ತನ್ನ ಬಗ್ಗೆ ಕರುಣೆ ಹಾಗೂ ಸಹಾನುಭೂತಿ ಉಳ್ಳವರಾಗಿದ್ದರು ಎಂಬುದನ್ನು ಬುನ್‌ರೋಕೊ ಜ್ಞಾಪಿಸಿಕೊಂಡನು. ಆದರೆ ಹೊಸ ಪಾದರಕ್ಷೆಗಳನ್ನು ಅವನು ಹಾಕಿಕೊಂಡ ಮೇಲೆ ಎಲ್ಲರೂ ಅವನಿಂದ ದೂರವಾದರು. ' ಅವರು, ನರಿ ನನ್ನನ್ನು ಮರುಳುಮಾಡಿದೆ ಎಂದು ತಿಳಿದುಕೊಂಡಿದ್ದಾರೆ', ಎಂದು ಯೋಚಿಸಿದ. 'ಅವರಿನ್ನು ನನ್ನನ್ನು ಇಷ್ಟ ಪಡುವುದಿಲ್ಲ....' ಅವನ ಭಾವನೆಗಳಿಗೆ ಪೆಟ್ಟು ಬಿತ್ತು. ಯಾವಾಗಲೂ ಬುನ್‌ರೋಕೊವಿಗೆ ಕರುಣೆ ತೋರಿಸುತ್ತಿದ್ದ ಯೋಷಿನೋರಿ ಕೂಡಾ ಆ ರಾತ್ರಿ ತುಂಬಾ ವಿಚಿತ್ರವಾಗಿ ನಡೆದುಕೊಂಡಿದ್ದನು. ಬುನ್‌ರೋಕೊವಿಗೆ ಶೀತವಾದರೆ ಕೂಡಲೇ ಅವನು ಅವನನ್ನು ಬೆಚ್ಚಗೆ ಇಡಲು ತನ್ನ ಸ್ವಂತ ಅಂಗಿಯನ್ನೇ ಕೊಡುತ್ತಿದ್ದ. ಆದರೆ, ಆ ರಾತ್ರಿ ಬುನ್‌ರೋಕೊ ಎರಡನೇ ಸಲ ಕೆಮ್ಮಿದಾಗಲೂ ಕೂಡಾ ಯೋಷಿನೋರಿ ಅವನಿಗೆ ತನ್ನ ಅಂಗಿಯನ್ನು ಕೊಡಲು ಮುಂದೆ ಬಂದಿರಲಿಲ್ಲ.

ಅವನು ತನ್ನ ಮನೆಯ ಹಿಂದಿನ ಗೇಟನ್ನು ತಲುಪಿದ್ದನು. ಮರದ ಬಾಗಿಲನ್ನು ಅವನು ತೆರೆಯುತ್ತಿದ್ದಂತೆಯೇ ನೆಲದ ಮೇಲೆ ಅವನ ನೆರಳನ್ನು ಕಂಡನು. ಅವನ ಅನುಮಾನ ದೃಢವಾಯಿತು: 'ನರಿ ನನ್ನನ್ನು ವಶಪಡಿಸಿಕೊಂಡಿರಬಹುದು. ಹಾಗಿದ್ದಲ್ಲಿ ನನ್ನ ತಂದೆ ಮತ್ತೆ ತಾಯಿ ನನ್ನೊಡನೆ ಹೇಗೆ ವ್ಯವಹರಿಸುವರು?......'

ಅವನ ತಂದೆ ಪೀಪಾಯಿ ಮಾಡುವವರ ಸಭೆಗೆ ಹೋಗಿದ್ದನು. ಅವನು ಮನೆಗೆ ಹೊತ್ತಾಗಿ ಬರುವನು, ಆದ್ದರಿಂದ ಬುನ್‌ರೋಕೊ ಮತ್ತು ಅವನ ತಾಯಿ ಅವನಿಗಾಗಿ ಕಾಯದೆ ಮಲಗಲು ನಿರ್ಧರಿಸಿದರು. ಬುನ್‌ರೋಕೊ ಆಗಲೇ ಶಾಲೆಗೆ ಹೋಗುತ್ತಿದ್ದರೂ ಇನ್ನೂ ತಾಯಿಯೊಡನೆ ಮಲಗುತ್ತಿದ್ದನು. ನಿಜವಾಗಿಯೂ ಅವನು ತುಂಬ ಮುದ್ದಿನಿಂದ ಹಾಳಾದ ಅಸಹಾಯಕನಾದ ಒಬ್ಬನೇ ಮಗನಾಗಿದ್ದನು.

ಅವರು ಹಾಸಿಗೆಯಲ್ಲಿ ಮಲಗಿದ ಮೇಲೆ, ಅವನ ತಾಯಿ ಹೇಳಿದಳು, 'ಉತ್ಸವದ ಬಗ್ಗೆ ಎಲ್ಲಾ ವಿಷಯವನ್ನು ತಿಳಿಸು', ಬುನ್‌ರೋಕೊ ಮಾಡಿದ್ದನ್ನೆಲ್ಲವನ್ನೂ ತಿಳಿದುಕೊಳ್ಳಲು ಅವಳು ಯಾವಾಗಲೂ ಇಷ್ಟ ಪಡುತ್ತಿದ್ದಳು. ಅವನು ಶಾಲೆಗೆ ಹೋದಾಗ ಪ್ರತಿ ಕ್ಷಣ ಅವನು ಏನು ಮಾಡಿದನೆಂಬುದನ್ನು ಯಥಾರ್ಥವಾಗಿ ತಿಳಿದುಕೊಳ್ಳಲು ಇಷ್ಟ ಪಡುತ್ತಿದ್ದಳು. ಸಿನಿಮಾಕ್ಕೆ ಹೋದಾಗ, ಅವನು ನೋಡಿದ ಪೂರಾ ಕತೆಯನ್ನು ಕೇಳುತ್ತಿದ್ದಳು.

ಬುನ್‌ರೋಕೊ ಮಾತನಾಡುವುದರಲ್ಲಿ ಅಷ್ಟು ಗಟ್ಟಿಗನಾಗಿರಲಿಲ್ಲ. ನಡೆದಿದ್ದನ್ನೆಲ್ಲಾ ಚೂರು ಚೂರಾಗಿ ಹೇಳುತ್ತಿದ್ದನು. ಆದರೆ ಅವನ ತಾಯಿ ಗಮನ ಕೊಟ್ಟು ಯಾವಾಗಲೂ ಕೇಳುತ್ತಿದ್ದಳು, ಅವನ ವಿವರಗಳಿಂದ ಸಂತೋಷಗೊಂಡವಳಂತೆ ಕಾಣುತ್ತಿದ್ದಳು.

'ನೃತ್ಯದ ಗುಂಪಿನ ಹೆಂಗೆಳೆಯರಲ್ಲಿ ಆ ಪಂಪ್ ಮನೆ ಮುದಿ ಟೋನೇಕೋ ಸಹ ಇದ್ದಳು...'ಬುನ್‌ರೋಕೊ ಹೇಳಿದ.'ಹಾಗೋ?', ಅವನ ತಾಯಿ ಮನಸಾರೆ ನಕ್ಕಳು. 'ಮತ್ತೆ ಉಳಿದವರು ಯಾರ್‍ಯಾರು – ಹೇಳಬಲ್ಲೆಯಾ?'

ಬುನ್‌ರೋಕೊ ಜ್ಞಾಪಿಸಿಕೊಳ್ಳುವಂತೆ ತನ್ನ ವಿಶಾಲ ಕಣ್ಣುಗಳನ್ನು ಅಗಲವಾಗಿ ತೆಗೆದನು, ಆದರೆ ಅವನ ಮುಂದಿನ ವರದಿ ಆ ಉತ್ಸವದ ಬಗ್ಗೆ ಆಗಿರಲಿಲ್ಲ.

'ಅಮ್ಮ, ರಾತ್ರಿಯಲ್ಲಿ ಮೊಟ್ಟಮೊದಲ ಸಲ ಹೊಸ ಪಾದರಕ್ಷೆಗಳನ್ನು ಹಾಕಿಕೊಂಡರೆ, ನರಿ ವಶಪಡಿಸಿಕೊಳ್ಳುವುದು ನಿಜವೇ?'

ಅವನ ತಾಯಿ ಆಶ್ಚರ್ಯಗೊಂಡಳು, ಕ್ಷಣಕಾಲ ತಬ್ಬಿಬ್ಬಾದಳು. ಮೊದಲು ಬುನ್‌ರೋಕೊ ಏನು ಮಾತಾಡುತ್ತಿದ್ದಾನೆಂಬುದೇ ಅವಳಿಗೆ ಗೊತ್ತಾಗಲಿಲ್ಲ, ಆದರೆ, ಕೂಡಲೇ ತನ್ನ ಮುದ್ದು ಕೂಸಿಗೆ ಏನಾಗಿರಬಹುದೆಂಬುದನ್ನು ಊಹಿಸಿದಳು.

'ಹಾಗೆಂದು ಯಾರು ಹೇಳಿದರು?', ಎಂದು ಕೇಳಿದಳು. ಬುನ್‌ರೋಕೊ ಮತ್ತೊಂದು ಸಲ ಪ್ರಾಮಾಣಿಕವಾಗಿ ಅದೇ ಪ್ರಶ್ನೆಯನ್ನು ಕೇಳಿದನು – 'ಅದು ನಿಜವೇನಮ್ಮಾ?'

'ಇಲ್ಲ, ಖಂಡಿತ ಇಲ್ಲ, ಬಹಳ ಹಿಂದಿನ ಕಾಲದಲ್ಲಿ ಮಾತ್ರ ಜನಗಳು ಅಂತಹ ವಿಷಯಗಳನ್ನು ನಂಬುತ್ತಿದ್ದರು.'

'ಹಾಗಾದರೆ, ಅದು ಸುಳ್ಳು.'

'ಹೌದು, ಅದು ಸುಳ್ಳು.'

'ನಿನಗೆ ನಿಜವಾಗಿ ಗೊತ್ತಾ?'

'ಖಂಡಿತ'.

ಸ್ವಲ್ಪ ಕಾಲ ಬುನ್‌ರೋಕೊ ಮೌನವಾಗಿದ್ದನು. ಒಂದೆರಡು ಸಲ ಅವನು ತನ್ನ ದೊಡ್ಡ ಕಣ್ಣುಗಳನ್ನು ಅತ್ತಿತ್ತ ಹೊರಳಿಸಿದ. ಕೊನೆಗೆ ಅವನು ಹೇಳಿದನು, 'ಆದರೆ, ಅದು ನಿಜವಾದರೆ ನೀನೇನು ಮಾಡುವೆ?'

'ಏನು ನಡೆದರೆ?' ಎಂದು ತಾಯಿ ಕೇಳಿದಳು.

'ನಾನು ಹೇಳುವುದೇನೆಂದರೆ, ಒಂದು ವೇಳೆ ನರಿ ನನ್ನನ್ನು ವಶಪಡಿಸಿಕೊಂಡರೆ ನಾನು ನರಿಯಾಗಿ ಬದಲಾದರೆ, ನೀನೇನು ಮಾಡುವೆ....?'

ಅವನ ತಾಯಿ ಜೋರಾಗಿ ನಕ್ಕಳು.

'ನನಗೆ ಉತ್ತರ ಕೊಡು; ನನಗೆ ಉತ್ತರ ಕೊಡಮ್ಮಾ', ಪೇಚಾಟದಲ್ಲಿ ಸಿಕ್ಕಿ ಅವನು ತಾಯಿಯನ್ನು ಹಿಡಿದುಕೊಂಡು ಅಲ್ಲಾಡಿಸಿದನು.

ತಾಯಿ ಯೋಚಿಸಿದಂತೆ ನಟಿಸಿ ಹೇಳಿದಳು, 'ನೀನು ನರಿಯಾದರೆ, ಖಂಡಿತ ನಿನ್ನನ್ನು ನಮ್ಮ ಮನೆಯಲ್ಲಿ ಇಟ್ಟುಕೊಳ್ಳಲು ಆಗುವುದಿಲ್ಲ'.

ಬುನ್‌ರೋಕೊ ತನ್ನ ತಾಯಿಯ ಮಾತುಗಳನ್ನು ಕೇಳಿ, ಕಂಗೆಟ್ಟನು, 'ಹಾಗಾದರೆ, ನಾನೆಲ್ಲಿಗೆ ಹೋಗಬೇಕು?', ಎಂದು ಕೇಳಿದನು.

'ಕಾರಾಸೂನೆ ಬೆಟ್ಟಕ್ಕೆ ಹೋಗಬಹುದು', ತಾಯಿ ಉತ್ತರ ಕೊಟ್ಟಳು, 'ಅಲ್ಲಿ ನರಿಗಳು ಇನ್ನೂ ವಾಸಿಸುತ್ತವೆ ಎಂದು ಹೇಳುತ್ತಾರೆ.'

'ಆಗ ನೀನು ಮತ್ತು ತಂದೆ ಏನು ಮಾಡುವಿರಿ?'

ದೊಡ್ಡವರು ಆಗಾಗ್ಗೆ ಚಿಕ್ಕ ಮಕ್ಕಳನ್ನು ತಮಾಷೆ ಮಾಡುವಾಗ ಮಾಡುವಂತೆ

ತಾಯಿ ತನ್ನ ಮುಖದ ಮೇಲೆ ಗಂಭೀರ ಭಾವವನ್ನು ತಂದುಕೊಂಡಳು.

'ನಿನ್ನ ಬಗ್ಗೆ ಮಾತನಾಡಿಕೊಳ್ಳುತ್ತೇವೆ, ಬಹುಶಃ ನಾವು' 'ನಮ್ಮ ಪ್ರೀತಿಯ ಬುನ್‌ರೋಕೊ ನರಿಯಾಗಿದ್ದಾನೆ, ನಮಗೆ ಪ್ರಪಂಚದಲ್ಲಿ ಯಾವ ಸಂತೋಷವೂ ಉಳಿದಿಲ್ಲ, ಆದ್ದರಿಂದ ಮನುಷ್ಯ ಜಾತಿಯಿಂದ ದೂರವಾಗಿ ನರಿಗಳಾಗೋಣ' ಎಂದುಕೊಳ್ಳಬಹುದು.'

'ನೀನು ಮತ್ತು ತಂದೆ ಕೂಡಾ ನರಿಗಳಾಗುವಿರಾ?...'

'ಹೌದು, ನಿಮ್ಮ ತಂದೆ ಮತ್ತು ನಾನು ಹೊಸ ಪಾದರಕ್ಷೆಗಳನ್ನು ಕೊಂಡು, ನಾಳೆ ರಾತ್ರಿ ನಾವೂ ಕೂಡ ನರಿಗಳಾಗಿ ಬದಲಾಗುವೆವು. ಆಮೇಲೆ ನಾವು ಮೂವರೂ ಒಟ್ಟಿಗೆ ಕಾರಾಸೂನೆ ಬೆಟ್ಟಕ್ಕೆ ಹೋಗಬಹುದು'.

ಬುನ್‌ರೋಕೊ ಕಣ್ಣು ಬಿಡುತ್ತಾ, 'ಎತ್ತರದ ಪರ್ವತಗಳು ಇವೆಯಲ್ಲಾ, ಆ ಪಶ್ಚಿಮದಲ್ಲಿ ಇದೆಯಲ್ಲಾ ಅಲ್ಲಿಗೆ .....?''ಹೌದು, ಅದು ಶಮಾನ್‌ಪ್ರಿಫಕ್ಚ್‌ರ್‌ನಲ್ಲಿ, ನಾರಾವಾದ ನೈರುತ್ಯ ಭಾಗದಲ್ಲಿದೆ.'

'ಪರ್ವತಗಳ ಒಳ ಭಾಗದಲ್ಲಿದೆಯೇ?'

'ಹೌದು, ಪೈನ್ ಮರಗಳಿಂದ ಮುಚ್ಚಿಕೊಂಡಿದೆ'.

'ಅಲ್ಲಿ ಬೇಟೆಗಾರರು ಇರುವುದಿಲ್ಲವೇ?'

'ಬಂದೂಕುಗಳಿರುವ ಬೇಟೆಗಾರರೆಂದು ನಿನ್ನ ಅರ್ಥವೇ? ಹೌದು, ಇರುತ್ತಾರೆ, ಏಕೆಂದರೆ, ಅಲ್ಲಿ ಯಾರೂ ಇರುವುದಿಲ್ಲ, ಮತ್ತೆ ಅಲ್ಲಿ ಅನೇಕ ಪ್ರಾಣಿಗಳಿರುತ್ತವೆ.'

'ಬೇಟೆಗಾರರು ನಮ್ಮ ಬೆನ್ನಟ್ಟಿದರೆ ಏನು ಮಾಡುವುದು?'

'ನಾವು ಗುಹೆಯೊಳಗೆ ಅವಿತುಕೊಂಡು ಮೂಲೆಯಲ್ಲಿ ಮುದುರಿಕೊಳ್ಳುವೆವು. ಆಗ ಬೇಟೆಗಾರರು ನಮ್ಮನ್ನು ನೋಡುವುದಿಲ್ಲ.'

'ಆದರೆ ಮಂಜು ಬಿದ್ದಾಗ, ಸಾಕಷ್ಟು ಆಹಾರ ಇರುವುದಿಲ್ಲ ಆಹಾರಕ್ಕಾಗಿ ಹೊರಗೆ ಹೋಗಬೇಕಾಗುತ್ತದೆ. ಆಗ ಬೇಟೆಗಾರರ ನಾಯಿಗಳು ನಮ್ಮನ್ನು ಗುರುತಿಸುತ್ತವೆ.'

'ಆಗ ನಾವು ಪ್ರಾಣ ಉಳಿಸಿಕೊಳ್ಳಲು ಒಟ್ಟಿಗೆ ಓಡುವೆವು.'

'ನೀವಿಬ್ಬರೂ ದೊಡ್ಡವರು ವೇಗವಾಗಿ ಓಡಬಲ್ಲಿರಿ, ಆದರೆ ನಾನು ಮರಿ, ಹಿಂದೆಬೀಳುವೆನು.'

'ನಾವು ನಿನ್ನನ್ನು ನಮ್ಮ ಎರಡೂ ಪಂಜಗಳಿಂದ ತೆಗೆದುಕೊಂಡು ಜೊತೆಗೆ ಎಳೆದುಕೊಂಡು ಹೋಗುವೆವು.'

'ನಮ್ಮ ಹಿಂದೆ ಬರುವ ನಾಯಿಗಳು?'

ತಾಯಿ ಮೌನವಾದಳು. ಮತ್ತೆ ಅವಳು ಮಾತನಾಡಿದಾಗ ಅವಳ ಮಾತಿನಲ್ಲಿ ಹಾಸ್ಯ ಭಾವ ಹೊರಟು ಹೋಗಿತ್ತು. 'ಆಗ ನಾನು ನಿನ್ನ ಹಿಂದೆ ನಿಧಾನವಾಗಿ ಕುಂಟುತ್ತಾ ಬರುವೆ'.

'ಏಕೆ?' ಹುಡುಗ ಕೇಳಿದ.

'ಏಕೆಂದರೆ ನಾಯಿ ತನ್ನ ಹಲ್ಲುಗಳಿಂದ ನನ್ನನ್ನು ಹಿಡಿಯುತ್ತದೆ. ಬೇಟೆಗಾರರು ಬಂದು ನನ್ನನ್ನು ಕಟ್ಟಿಹಾಕುವವರೆಗೆ ಅದು ಹಿಡಿದುಕೊಂಡಿರುತ್ತದೆ. ನಿನಗೆ ಹಾಗೂ ನಿನ್ನ ತಂದೆಗೆ ಸುರಕ್ಷಿತವಾಗಿ ಓಡಿಹೋಗಲು ಸಮಯ ಸಿಗುತ್ತದೆ.'

ಬುನ್‌ರೋಕೊವಿಗೆ ಆಶ್ಚರ್ಯವಾಯಿತು. ನೆಟ್ಟ ಕಣ್ಣಿನಿಂದ ತಾಯಿಕಡೆ ದೃಷ್ಟಿಸಿ ನೋಡುತ್ತಾ ಕೂಗಿದ, 'ಇಲ್ಲಮ್ಮಾ ಇಲ್ಲ. ಆಗ ನಾವು ನಿನ್ನನ್ನು ಕಳೆದುಕೊಳ್ಳುತ್ತೇವೆ.'

'ಮಗೂ, ಆದರೆ, ಬೇರೆ ಮಾರ್ಗವಿಲ್ಲ', ಅವನ ತಾಯಿ ಶಾಂತವಾಗಿ ಹೇಳಿದಳು, 'ತಾಯಿ ಹಿಂದೆ ನಿಧಾನವಾಗಿ ಕುಂಟಿಕೊಂಡು ಹೋಗುವಳು'.

'ಆಗಲ್ಲ; ಆಗಲ್ಲ' ಬುನ್‌ರೋಕೊ ಹಾಸಿಗೆಯಿಂದ ದಿಂಬನ್ನು ಒದ್ದು ಕಿರುಚಿದನು.

ಆಮೇಲೆ ಕ್ಷಣಕಾಲ ತನ್ನ ವಿಶಾಲ ಕಣ್ಣುಗಳಿಂದ ಕಣ್ಣೀರು ಸುರಿಸುತ್ತಾ ತಾಯಿಯನ್ನು ತಬ್ಬಿಕೊಂಡನು.

ತಾಯಿ ಕೂಡಾ ಕಣ್ಣೀರಿಡುತ್ತಾ ತನ್ನ ರಾತ್ರಿ ಉಡುಪಿನ ತೋಳುಗಳಿಂದ ಅವುಗಳನ್ನು ಒರಸಿಕೊಂಡು, ಚಿಕ್ಕ ತಲೆದಿಂಬನ್ನು ಮೆಲ್ಲಗೆ ಬುನ್‌ರೋಕೊವಿನ ತಲೆಕೆಳಗೆ ಇಟ್ಟಳು.

ಚಿತ್ರಗಳು: ಟೈಕಿಪಿ ಮಿಯೋಷಿ

### ಕೊರಿಯ

# ಯೂನಿ ಮತ್ತು ಎತ್ತು

### ಓ ಯಾಂಗ್ ಸೂ

ಅನೇಕ ಜನಗಳಿಗೆ ಎತ್ತುಗಳು ಇಷ್ಟ. ಆದರೆ ಯೂನಿಗೆ ಹಾಗಲ್ಲ. ಅದಕ್ಕೆ ಬದಲು ಅವನು ಕುದುರೆಗಳನ್ನು ಇಷ್ಟಪಡುತ್ತಿದ್ದ. ಅವನಿಗೆ ಎತ್ತುಗಳನ್ನು ಇಷ್ಟಪಡುವುದು ಸಾಧ್ಯವಾಗಲೇ ಇಲ್ಲ. ಎತ್ತು ನಿಧಾನ, ಕುದುರೆಯಾದರೆ ಸವಾರಿ ಮಾಡಬಹುದು, ಸುಲಭವಾಗಿ ಕರೆದುಕೊಂಡುಹೋಗಬಹುದು, ಅದು ಗಾಡಿಯನ್ನು ಸಹ ಎಳೆಯಬಲ್ಲದು. ಎತ್ತನ್ನು ಮುದ್ದುಮಾಡುವುದು ಅದರ ಕೊಂಬುಗಳ ಕಾರಣದಿಂದ ಕಷ್ಟ. ಆಮೇಲೆ ಎತ್ತು ಹೊಟ್ಟೆಬಾಕನಂತೆ ಯಾವಾಗಲೂ ಏನನ್ನಾದರೂ ಅಗಿಯುತ್ತಲೇ ಇರುತ್ತದೆ.

ಈ ಎಲ್ಲಾ ಕಾರಣಗಳ ಜೊತೆಗೆ, ಯೂನಿ ಎತ್ತನ್ನು ಇಷ್ಟಪಡದೆ ಇರುವುದಕ್ಕೆ ಬೇರೊಂದು ಕಾರಣವಿತ್ತು. ಅವನು ವಾಸಮಾಡುತ್ತಿದ್ದ ಸಣ್ಣ ಹಳ್ಳಿಯಲ್ಲಿ ಸುಮಾರು ಹತ್ತು ಮನೆಗಳಿದ್ದುವು. ಅವುಗಳ ಮುಂದೆ ಭತ್ತವನ್ನು ಒಕ್ಕಲು ಹಳ್ಳಿಯವರೆಲ್ಲಾ ಉಪಯೋಗಿಸುತ್ತಿದ್ದ ಒಂದು ಕಣ ಇತ್ತು. ಸುತ್ತಲೂ ಎಲ್ಲಾ ಕಡೆ ಇಳಿಜಾರು ರಸ್ತೆಗಳು ಮತ್ತು ಭತ್ತದ ಮೂಟೆಗಳು, ದೂರದಲ್ಲಿ ಪರ್ವತಗಳ ಶ್ರೇಣಿ ಗೋಪುರದಂತಿತ್ತು. ಹಳ್ಳಿಯ ಹುಡುಗರು ಆ ಕಣವನ್ನು ತಮ್ಮ ಆಟದ ಮೈದಾನವೆಂದು ಭಾವಿಸಿದ್ದುದು ಸಹಜವೇ.

ಸುಗ್ಗಿಯ ಕಾಲ, ಭತ್ತದ ಗದ್ದೆಗಳನ್ನು ಕುಯಿಲು ಮಾಡಲು ಸರಿಯಾದ ಕಾಲ. ಕಣದ ಪತ್ತಿರದಲ್ಲಿದ್ದ ಒಂದು ತೆಳ್ಳನೆಯ ಕುರುಚಲು ವಿಲ್ಲೋ (willow) ಗಿಡಕ್ಕೆ ಒಂದು ಎತ್ತನ್ನು ಕಟ್ಟಿದ್ದರು. ಕಧಿಯ ಕಣ್ಣುಗಳು, ಒಂದು ಕಿವಿ, ಹೊಟ್ಟೆ ಮತ್ತು ಗೊರಸಿನ ಮೇಲಿನ ಕರೀ ಚುಕ್ಕೆಗಳನ್ನು ಬಿಟ್ಟು ಆ ಎತ್ತಿನ ಉಳಿದ ಎಲ್ಲಾ ಭಾಗಗಳೂ ಕಂದು ಬಣ್ಣಕ್ಕಿದ್ದುವು. ಆ ಕುರುಚಲು ಗಿಡದ (ವಿಲ್ಲೋ) ಕೊಂಬೆಗಳ ತುದಿಗಳು ಹಸಿರಾಗಿದ್ದುವು.

ಊಟವಾಗಿ, ಒಂದು ಒಳ್ಳೆ ನಿದ್ರೆ ಆದ ಮೇಲೆ ಯೂನಿ ಹಳೆಯ ಪರಕಲು ಚೆಂಡನ್ನು ತೆಗೆದುಕೊಂಡು ಕಣದಲ್ಲಿ ಆಟವಾಡಲು ಹೋದನು.

ಆ ದೊಡ್ಡದಾದ, ಭಯಂಕರವಾಗಿ ಕಾಣುವ ಎತ್ತು ಅವನನ್ನು ಆಶ್ಚರ್ಯಚಕಿತನನ್ನಾಗಿ ಮಾಡಿತು. ಜೋರಾಗಿ ಕಿರಿಚಿಕೊಂಡ. ಅವನ ಕಣ್ಣುಗಳು ಹಿಗ್ಗಿದುವು. ತುಂಬಾ ಹೊತ್ತು ಅಲ್ಲಾಡದೆ ನಿಂತುಕೊಂಡು ಅದರ ಪ್ರತಿಯೊಂದು



ಚಲನೆಯನ್ನೂ ಗಮನಿಸುತ್ತಾ ನೆಟ್ಟ ದೃಷ್ಟಿಯಿಂದ ನೋಡಿದನು. ಆಗಾಗ್ಗ ಎತ್ತು ನೊಣವನ್ನು ಓಡಿಸುವುದಕ್ಕಾಗಿ ತನ್ನ ಬಾಲವನ್ನು ಅಲ್ಲಾಡಿಸುತ್ತಿತ್ತು. ಕಣಿವೆಯಿಂದ ಆಚೆ ಇರುವ ಚಿಗುರುತ್ತಿರುವ್ವ ಓಕ್ ಮರಗಳತ್ತ ನೋಡುತ್ತಿರುವಂತೆ ಕಾಣಿಸುತ್ತಿತ್ತು. ಆಹಾರವನ್ನು ಮೆಲುಕುಹಾಕುತ್ತಿದ್ದಾಗ ಬಹುಶಃ ನಿರ್ದಿಷ್ಟವಾಗಿ ಏನನ್ನೂ ಯೋಚಿಸುತ್ತಿರಲಿಲ್ಲ.

ಕ್ರಮೇಣ ಯೂನಿಯ ಭಯ ಕಡಿಮೆಯಾದಂತೆ ಅವನು ತುಂಬಾ ಕುತೂಹಲಿಯಾದನು. ಒಂದೊಂದ್ದೇ ಹೆಜ್ಜೆ ಇಡುತ್ತಾ ಎತ್ತಿನ ಹತ್ತಿರ ಹೋದನು. ಇದ್ದಕ್ಕಿದ್ದಂತೆ ಆ ಎತ್ತು ಯೂನಿಯ ಕಡೆ ತನ್ನ ತಲೆಯನ್ನು ತಿರುಗಿಸಿತು. ಯೂನಿ ದಾರಿಯಲ್ಲಿ ಸತ್ತಂತೆ ನಿಂತನು. ಆ ಎತ್ತು ತನ್ನ ಚೆಂಡನ್ನು ಕಿತ್ತುಕೊಳ್ಳಲು ಇಷ್ಟಪಡುತ್ತಿದೆ ಎಂದು ಭಾವಿಸುತ್ತಾ ಚೆಂಡನ್ನು ಬೆನ್ನಿನ ಹಿಂದೆ ಇಟ್ಟುಕೊಂಡನು. ಅದಕ್ಕೆ ಬದಲಾಗಿ ಆ ಎತ್ತು ತನ್ನ ಮೈಯನ್ನು ಅನೇಕ ಸಲ ತನ್ನ ನಾಲಿಗೆಯಿಂದ ನೆಕ್ಕಿತು, ಬಾಲವನ್ನು ತಿರುಗಿಸಿತು, ಕಣ್ಣುಗಳನ್ನು ಕೆಳಗೆ ಮಾಡಿಕೊಂಡು, ಪುನಃ ಅದರ ಆಹಾರವನ್ನು ಮೆಲುಕು ಹಾಕಲು ಪ್ರಾರಂಭಿಸಿತು.

ಚೆಂಡನ್ನು ಇನ್ನೂ ಬಿಗಿಯಾಗಿ ತನ್ನ ಬೆನ್ನ ಹಿಂದೆ ಹಿಡಿದುಕೊಂಡು, ಯೂನಿ ಆಶ್ಚರ್ಯಪಡಲಾರಂಭಿಸಿದನು;'ಕುದುರೆಗಳಿಗೆ ಏಕೆ ಕೊಂಬುಗಳಿರುವುದಿಲ್ಲ? ಎತ್ತು ಮತ್ತು ಕುದುರೆಗೆ ಜಗಳವಾದರೆ, ಯಾವುದು ಗೆಲ್ಲುತ್ತದೆ? ಅದರ ಕೊಂಬುಗಳಿಂದಾಗಿ ಗೆಲ್ಲುವುದು ಎತ್ತೇ ಎಂದು ಅವನು ನಿಶ್ಚಯಿಸಿದ್ದ. ಯೂನಿ ಕುದುರೆಗಳನ್ನು

ಪ್ರೀತಿಸುತ್ತಿದ್ದನಾದ್ದರಿಂದ ಎತ್ತು ಜಯಶಾಲಿಯಾಗುವುದು ಅವನಿಗೆ ಇಷ್ಟವಿರಲಿಲ್ಲ.

ಹೀಗೆ ಎತ್ತು ಯಾವಾಗಲೂ ಏನನ್ನಾದರೂ ತಿನ್ನುತ್ತಿರುವಂತೆ ಅನ್ನಿಸುತ್ತದೆ ಎಂಬುದು ಅವನಿಗೆ ಒಂದು ಆಶ್ಚರ್ಯವಾಗಿತ್ತು. ಎಷ್ಟೇ ಹತ್ತಿರ ಹೋಗಿ ಅದನ್ನು ನೋಡಿದಾಗ್ಯೂ ಆ ಪ್ರಾಣಿ ತನ್ನ ಬಾಯಲ್ಲಿ ಏನನ್ನಾದರೂ ಇಟ್ಟುಕೊಳ್ಳುವುದನ್ನು ಅವನು ನೋಡಲಿಲ್ಲ. ಆದರೂ ಅದು ಒಂದೇ ಸಮನೆ ಅಗಿಯುತ್ತಲೇ, ಇರುತ್ತದೆ.

ಅವನ ಕುತೂಹಲ ಕಡಿಮೆಯಾಯಿತು, ಎತ್ತಿನಲ್ಲಿ ಅವನಿಗೆ ಆಸಕ್ತಿ ಕಡಿಮೆಯಾಗಲು ಪ್ರಾರಂಭಿಸಿದ ಮೇಲೆ ಅವನು ಸುತ್ತಲೂ ತಿರುಗಿ ತನ್ನ ಚೆಂಡನ್ನು ತೆಗೆದುಕೊಂಡು ಮೇಲಕ್ಕೆ ಗಾಳಿಯಲ್ಲಿ ಎಸೆಯುವ ಮತ್ತು ಹಿಡಿಯುವ ಆಟವನ್ನು ಆಡಲು ಪ್ರಾರಂಭಿಸಿದನು. ಆಮೇಲೆ ಆ ಕಲ್ಲಿನ ಮೇಲೆ ನಡೆಯುವ ದಾರಿಯಲ್ಲಿ ಚೆಂಡನ್ನು ಪುಟ ಹಾರಿಸಿದನು, ಒಂದು ಸಲ ಅದು ಹಿಡಿತದಿಂದ ತಪ್ಪಿಸಿಕೊಂಡು ನೇರವಾಗಿ ಎತ್ತಿನ ಕೆಳಗೆ ಉರುಳಿಕೊಂಡು ಹೋಯಿತು.

ಚೆಂಡನ್ನು ಅಟ್ಟಿಸಿಕೊಂಡು ಹೋಗುತ್ತಾ, ಯೂನಿ ಕೂಡಲೇ ಅದರ ಹತ್ತಿರವೇ ಚೆಂಡು ಇರುವುದನ್ನು ನೋಡಿದನು. ಅವನಿಗೆ ಏನು ಮಾಡಬೇಕೆಂದು ಗೊತ್ತಾಗಲಿಲ್ಲ. ಅರ್ಧ ಮುಚ್ಚಿದ ಕಣ್ಣುಗಳಿಂದ ಆಹಾರವನ್ನು ಮೆಲುಕು ಹಾಕುತ್ತಾ ಇದ್ದ ಎತ್ತು ಚೆಂಡನ್ನು ಗಮನಿಸಿದಂತೆ ಕಾಣಿಸಲಿಲ್ಲ ಅಥವಾ ಅವನು ಬಂದ ಬಗ್ಗೆಯೂ ಕೂಡಾ ಅದಕ್ಕೆ ಗಮನವಿರಲಿಲ್ಲ. ಚೆಂಡು ಅದರ ಕೆಳಗೆ ಉರುಳಿಕೊಂಡು ಹೋಗಿ ಬಿದ್ದಿರುವುದು ಆ ಎತ್ತಿಗೆ ಗೊತ್ತಿಲ್ಲ ಎಂಬುದರ ಬಗ್ಗೆ ಯೂನಿ ಖಚಿತ ಮಾಡಿಕೊಂಡನು.



ಎತ್ತಿಗೆ ಏನಾಯಿತು ಎಂಬುದರ ಬಗ್ಗೆ ಅರ್ಥವಾಗುವ ಮೊದಲು ಆ ಚೆಂಡನ್ನು ವಾಪಸು ಪಡೆಯಲು ಪ್ರಯತ್ನಿಸಬೇಕೆಂದು ಯೂನಿ ನಿಶ್ಚಯಿಸಿದನು. ಕಣ್ಣುಗಳನ್ನು ಎತ್ತಿನತ್ತ ನೆಟ್ಟು ಎಚ್ಚರಿಕೆಯಿಂದ ಅದರ ಹೊಟ್ಟೆಯ ಕೆಳಕ್ಕೆ ತನ್ನ ಉಸಿರನ್ನು ಬಿಗಿಹಿಡಿದುಕೊಂಡು ಮೊಣಕಾಲೂರಿ ಬಗ್ಗಿದನು. ಆಗ ತನ್ನ ಕೊರಳಿನ ಗಂಟೆಗಳು ಜೋರಾಗಿ ಬಡಿಯುವಂತೆ ಮಾಡಿ, ಎತ್ತು ತನ್ನ ಬಾಲವನ್ನು ತಿರುಗಿಸಿತು. ಯೂನಿ ಎತ್ತಿನ ಕೆಳಗಿನಿಂದ ನಡುಗುತ್ತಾ ತಲೆಕೆಳಗಾಗಿ ಹೊರಗೆ ಹಾರಿದನು, ಆಮೇಲೆ ಮುಷ್ಟಿಯ ಮೇಲೆ ಹಿಂದಕ್ಕೆ ವಾಲಿ,'ಕತ್ತೆ, ಕತ್ತೆ' ಎಂದು ಕಿರಿಚಿದನು.

ಯಾವುದನ್ನೂ ಗಮನಿಸುತ್ತಿಲ್ಲವೆಂದು ತೋರಿಸುವಂತೆ, ಆ ಎತ್ತು ಒಂದೆರಡು ಸಲ ತನ್ನ ಕಿವಿಗಳನ್ನು ಮಡಿಚಿಕೊಂಡು ಪುನಃ ಮೆಲುಕುಹಾಕತೊಡಗಿತು.

ಯೂನಿಗೆ ಕೋಪ ಬಂತು. ಅವನು ಕಾಲ ಮೇಲೆ ಕಾಲನ್ನು ಹಾಕಿಕೊಂಡು, ತನ್ನ ಕೈಗಳ ಮೇಲೆ ಗಲ್ಲವನ್ನು ವಾಲಿಸಿ 'ಚೆಂಡನ್ನು ಹೇಗೆ ಹಿಂದಕ್ಕೆ ಪಡೆಯಲಿ? ಅದನ್ನು ಹಿಂದಕ್ಕೆ ನಾನು ಪಡೆಯಲು ಅದು ಏಕೆ ಬಿಡುತ್ತಿಲ್ಲ? ಚೆಂಡು ಎತ್ತಿನದೇನಲ್ಲ. ಹೋಗಿ ಒಂದು ಕೋಲನ್ನು ತರಲೆ? ಕೋಲನ್ನು ಹುಡುಕುತ್ತಿದ್ದಾಗ ಎತ್ತು ಚೆಂಡನ್ನು ಬಚ್ಚಿಡಲು ಪ್ರಯತ್ನಿಸಿದರೆ? ಆಗ ನಾನೇನು ಮಾಡಬೇಕು?' ಎಂದು ಯೋಚಿಸಿದ.

ಹೀಗೆ ಯೋಚಿಸಿದಂತೆಲ್ಲಾ, ಅವನಿಗೆ ಹೆಚ್ಚು ಕೋಪ ಬರುತ್ತಿತ್ತು. ಯೂನಿ ತನ್ನ ಕಣ್ಣುಗಳ ಮೂಲೆಗಳಿಂದ ಆ ಎತ್ತಿನ ಕಡೆ ನೋಡಿದನು. ಎತ್ತು ನಿದ್ರೆ ಮಾಡುತ್ತಿತ್ತು. ಅದರ ಕಣ್ಣುಗಳು ಭದ್ರವಾಗಿ ಮುಚ್ಚಿದ್ದುವು, ಆದರೆ ವಿಚಿತ್ರವೆಂದರೆ, ಆಹಾರವನ್ನು ಮೆಲುಕು ಹಾಕುತ್ತಲೇ ಇತ್ತು. ತನ್ನ ಚೆಂಡನ್ನು ವಾಪಸು ಪಡೆಯುವ ಈ ಅವಕಾಶವನ್ನು ಬಿಡಬಾರದೆಂದು ಯೂನಿಗೆ ಅನ್ನಿಸಿತು. ಮತ್ತೆ ಪುನಃ ಎತ್ತಿನ ಕಡೆ ನೋಡಿದನು. ಅನುಮಾನವಿಲ್ಲದೆ, ಆ ಪ್ರಾಣಿ ನಿದ್ರೆ ಮಾಡುತ್ತಿತ್ತು. ಕೆಳಗೆ ಮೊಣಕಾಲೂರಿ ಬಗ್ಗುತ್ತಾ ಯೂನಿ ತನ್ನ ಕೈಯನ್ನು ಚಾಚಿದನು.

ಕೂಡಲೇ, ಯಾವ ವಿಧವಾದ ಮುಂಜಾಗರೂಕತೆಯನ್ನೂ ಕೊಡದೆ ಎತ್ತು ತನ್ನ ಬಾಲವನ್ನು ಯೂನಿಯ ಕೆನ್ನೆಗಳಿಗೆ ಹೊಡೆಯುವಂತೆ ತಿರುಗಿಸಿತು. ಅವನು ತನ್ನ ಕೈಗಳನ್ನು ತನ್ನ ಕೆನ್ನೆಗಳ ಮೇಲೆ ಇಟ್ಟುಕೊಂಡು ನೋವಿನಿಂದ ಕಿರಿಚಿದನು. ಎತ್ತಿನ ಕೆಳಗಿನಿಂದ ತೆವಳಿಕೊಂಡು ಹೊರಗೆ ಬಂದನು. ಕಟಬಾಯಿಯ ಬಳಿ ಬಾಸುಂಡೆ ಬಂದಿತ್ತು. ತಾನು ಬಾಯಿ ಬಿಟ್ಟರೆ ಅಳು ಬರುವುದೆಂದು ಅವನಿಗೆ ಗೊತ್ತಿತ್ತು.

ತಾನು ಹುಲಿಯ ಜೊತೆ ಹೇಗೆ ಜಗಳವಾಡಿ ಗೆಲ್ಲಬಲ್ಲೆ ಎಂದು ಅವನು ಜಂಬ ಕೊಚ್ಚಿಕೊಳ್ಳುತ್ತಿದ್ದುದನ್ನು ನೆನೆಸಿಕೊಂಡ. ಹೀಗೇಕೆ ಆಯಿತು? ಸ್ವಲ್ಪ ಹೊತ್ತಿಗೆ ಮುಂಚೆ ಅವನು ಕೆಳಕ್ಕೆ ಬಿದ್ದಿದ್ದ. ಆಗ ಮೈಕೈಗೆ ಏಟಾಗಿತ್ತು. ಸ್ವಲ್ಪ ರಕ್ತವೂ ಬಂದಿತ್ತು. ಆದರೆ ಈ ಸಾರಿ ಏನಾಯಿತು. ಕಣ್ಣೀರು ಇಣುಕತೊಡಗಿದವು. ಭಯದಿಂದ ತುಂಬಾ ನಡುಗುತ್ತಿದ್ದ.

ಕಣ್ಣುಗಳಲ್ಲಿ ನೀರು ತುಂಬಿಕೊಂಡಿದ್ದಾಗ್ಯೂ, ಅಳಲಿಲ್ಲ. ಕ್ರಮೇಣ ಅವನ ಹೆದರಿಕೆ ಕೋಪಕ್ಕೆ ತಿರುಗಿತು. ತನ್ನ ಕಣ್ಣುಗಳಲ್ಲಿ ಭರ್ಜಿಗಳನ್ನು ಇಟ್ಟುಕೊಂಡಿರುವಂತೆ ಎತ್ತಿನ ಕಡೆ ನೋಡಿದನು, ಹುಂಬನಂತೆ ಅವನು ಆ ಪ್ರಾಣಿಯ ಮೇಲೆ ಮುತ್ತಿಗೆ ಹಾಕುವನೇನೋ ಎನ್ನುವಂತಿತ್ತು. ಆಮೇಲೆ ಅಳುವ ಧ್ವನಿಯಲ್ಲಿ ಕಿರಿಚಿದನು. 'ಕತ್ತೆ, ಹಾಗಾದರೆ ನೀನು ನನ್ನ ಚೆಂಡನ್ನು ಕೊಡುವುದಿಲ್ಲವೇನು?'

ಎತ್ತು ನಿಶ್ಚಿಂತವಾಗಿ ಮೆಲುಕು ಹಾಕುತ್ತಾ ಇತ್ತು.

'ಕತ್ತೆ, ಇದು ನನ್ನ ಚೆಂಡು'; ಅವನ ಧ್ವನಿ ಅಳುವಿನಿಂದ ತುಂಬಿತ್ತು. ಕೊನೆಯ ಸಲ ಎತ್ತನ್ನು ಹೆದರಿಸುವಂತೆ ಮುಷ್ಟಿಯನ್ನು ಬಿಗಿದುಕೊಂಡನು. ಆದರೆ, ಎಷ್ಟು ಕಷ್ಟಪಟ್ಟು ಪ್ರಯತ್ನಿಸಿದಾಗ್ಯೂ ಅದರ ಕೊಂಬುಗಳಿಗೆ ತಾನು ಸಾಟಿಯಲ್ಲ ಎಂದು ಸುಮ್ಮನಾದ. ಎತ್ತಿಗೆ ಒಂದು ವೇಳೆ ಕೊಂಬುಗಳು ಇಲ್ಲದಿದ್ದರೆ, ಅವನು ಅದರೊಡನೆ ಕುಸ್ತಿಯಾಡಲೂ ಸಿದ್ಧನಿದ್ದ.

ತುಂಬಾ ಕೋಪಿಸಿಕೊಂಡಂತೆ ಆ ಎತ್ತು ಶಬ್ದ ಮಾಡುತ್ತಾ ತನ್ನ ನಾಲಿಗೆಯಿಂದ ಅದರ ಮೂಗಿನ ಹೊಳ್ಳೆಗಳನ್ನು ನೆಕ್ಕಿಕೊಂಡು, ಪುನಃ ತನ್ನ ಕಣ್ಣುಗಳನ್ನು ಮುಚ್ಚಿಕೊಂಡಿತು. ಯೂನಿಯ ಎಡಗಡೆ ಕೆನ್ನೆಯ ಮೇಲಿನ ಕೆಂಪು ಬಾಸುಂಡೆ ಕಂಬಳಿ ಹುಳುವಿನಂತೆ ಕಾಣುತ್ತಿತ್ತು. ಅದನ್ನು ತನ್ನ ಕೈಯಿಂದ ಉಜ್ಜಿಕೊಳ್ಳುತ್ತಾ, ಕೂಗಿ ಹೇಳಿದನು,'ಅಪ್ಪನಿಗೆ ಹೇಳುತ್ತೇನೆ, ಆಮೇಲೆ ನೋಡುವೆಯಂತೆ ಅಪ್ಪ ನಿನ್ನನ್ನು ವಿಚಾರಿಸಿಕೊಳ್ಳುವನು'.

ಯೂನಿ ಮತ್ತೊಮ್ಮೆ ಎತ್ತಿನ ಕಡೆ ನೋಡಿದನು, ಅವನ ತುಟಿಗಳು ತಿರಸ್ಕಾರದಿಂದ ತಿರುಚಿಕೊಂಡುವು. ತಿರುಗಿ ಮನೆಗೆ ಓಡಿದನು.

ಮನೆಗೆ ಹೋದಾಗ, ಅವನ ತಂದೆ ತಾಯಿಗಳು ಹೊರಟು ಹೋಗಿದ್ದರು. ಅಡಿಗೆ ಮನೆಯಲ್ಲಿ ಮನೆಯ ಹೆಣ್ಣಾಳು, ಬಾರ್ಲಿಯಿರುವ ಮಡಕೆ ಕೆಳಗೆ, ಒಲೆಗೆ ಬೆಂಕಿ ಹಚ್ಚುತ್ತಿದ್ದಳು. ಅವಳು ಚೆಂಡನ್ನು ತೆಗೆದುಕೊಡಲು ತನ್ನೊಡನೆ ಬರುವವರೆಗೂ ಯೂನಿ ಅವಳನ್ನು ಕಾಡಿಸಿದ.

ಅವರು ಕಣದ ಬಳಿ ಬರುವ ಹೊತ್ತಿಗೆ ಎತ್ತು ತನ್ನ ಕುತ್ತಿಗೆಯ ಮೇಲೆ ನೇಗಿಲನ್ನು ಹೊತ್ತು, ಗದ್ದೆ ಉಳಲು ತುಂಬಾ ದೂರದಲ್ಲಿ ಹೋಗುತ್ತಿತ್ತು. ಹಿಂದೆ ಅದರ ಯಜಮಾನ ಹೋಗುತ್ತಿದ್ದ; ಕಣ ಖಾಲಿ ಬಿದ್ದಿತ್ತು, ಚೆಂಡು ಎಲ್ಲೂ ಕಣ್ಣಿಗೆ ಬೀಳಲಿಲ್ಲ.

ಚಿತ್ರಗಳು: ಕಿಮ್ ಯೊಂಗ್-ಜೂ

## ಮಲೇಷಿಯಾ

# ನೆರೆ–ಹೊರೆ

### ಇಸ್ಮಾಯಿಲ್ ಅಹಮದ್

(ಸಂಪಾದಕರ ಟಿಪ್ಪಣಿ: ಮಲೇಷಿಯಾದ ಜನಗಳು ಅನೇಕ ಬೇರೆ ಬೇರೆ ಧರ್ಮಗಳನ್ನು ಅನುಸರಿಸುತ್ತಾರೆ. ಹೊಸದಾಗಿ ಕಟ್ಟಲ್ಪಟ್ಟ ಪಟ್ಟಣದ ಬಡಾವಣೆಗಳಲ್ಲಿ ಒಟ್ಟಿಗೆ ವಾಸ ಮಾಡಬೇಕಾದಾಗ, ಅವರ ಧಾರ್ಮಿಕ ಭೇದಗಳು ಕೆಲವು ವೇಳೆ ತಪ್ಪು ತಿಳುವಳಿಕೆಗಳನ್ನುಂಟು ಮಾಡುತ್ತವೆ. ಆದರೆ, ಪ್ರಸ್ತುತ ಕಥೆಯಲ್ಲಿರುವಂತೆ ಒಳ್ಳೆಯತನ ಮತ್ತು ಸ್ನೇಹ ಅನೇಕ ತೊಂದರೆಗಳನ್ನು ಹೋಗಲಾಡಿಸಬಲ್ಲವು)

ಝುಲೇಲ ಮತ್ತು ಅವಳ ಸಂಸಾರ ಟಾಮನ್ ಸಂತೋಸಾ ಬಡಾವಣೆಗೆ ಮನೆ ಬದಲಾಯಿಸಿ ಹೋದಾಗ, ಅವಳು ಕೂಡಲೇ ಪಕ್ಕದ ಮನೆಯಲ್ಲಿ ವಾಸಿಸುತ್ತಿದ್ದ ಮೇಲಿಂಗ್‌ಳೊಡನೆ ಸ್ನೇಹ ಬೆಳೆಸಿದಳು. ಆ ಇಬ್ಬರೂ ಒಂದೇ ತರಗತಿಯಲ್ಲಿದ್ದುದರಿಂದ, ಅವರು ಪ್ರತಿದಿನ ಒಟ್ಟಿಗೆ ಶಾಲೆಗೆ ಹೋಗಿ ಬರುತ್ತಿದ್ದರು. ತಮ್ಮ ಇಡೀ ಬಿಡುವಿನ ಕಾಲವನ್ನು ಒಟ್ಟಿಗೆ ಕಳೆಯುತ್ತಿದ್ದರು. ಒಂದು ಸಂಜೆ ಮೇಲಿಂಗಳ ತಾಯಿ ಒಂದು ನಾಯಿಯನ್ನು ಕೊಂಡು ತರುವವರೆಗೆ ಅವರ ಸ್ನೇಹ ಅರಳಿತ್ತು.

'ನೋಡು ಮಗೂ, ನಾನು ನಿನಗಾಗಿ ಒಂದು ನಾಯಿ ಮರಿಯನ್ನು ತಂದಿದ್ದೇನೆ, ನಿನ್ನ ತಂದೆ ಮತ್ತು ನನ್ನ ಕಡೆಯಿಂದ ಇದು ನಿನಗೆ ಹುಟ್ಟು ಹಬ್ಬದ ಉಡುಗೊರೆ'.

'ನನಗಾಗಿ!' ಹುಡುಗಿ ಸಂತೋಷದಿಂದ ಆಶ್ಚರ್ಯಪಟ್ಟಳು. ನಾಯಿಮರಿಯನ್ನು ಆಲಂಗಿಸಿಕೊಂಡು, ಅದಕ್ಕೆ ಹೇಳಿದಳು; 'ಓ, ನೀನು ತುಂಬಾ ಸುಂದರವಾಗಿದ್ದೀಯ; ನಾನು ನಿನಗೆ 'ಜೋಹಾನ್' ಎಂದು ಹೆಸರಿಡಬೇಕೆಂದು ಯೋಚಿಸುತ್ತಿದ್ದೇನೆ. ಹೌದು, 'ಜೋಹಾನ್'.

ಆದರೆ, ನಾಯಿಮರಿಯ ಬಗ್ಗೆ ಗೊತ್ತಾದ ಮೇಲೆ ಝುಲೇಲ ತಾಯಿ ಅಸಮಾಧಾನಗೊಂಡಳು. ಝುಲೇಲಳ ಕುಟುಂಬದ ಧರ್ಮದ ಪ್ರಕಾರ, ನಾಯಿಗಳು ತುಂಬಾ ಕೊಳಕಾಗಿರುತ್ತುವೆಯಾದ್ದರಿಂದ ಅವುಗಳನ್ನು ಮನೆಯಲ್ಲಿ ಸಾಕು ಪ್ರಾಣಿಯಂತೆ ಇಟ್ಟುಕೊಳ್ಳಬಾರದು. ಅವಳು ಅದರ ಬಗ್ಗೆ ತನ್ನ ಗಂಡನೊಡನೆ ಮಾತನಾಡಲ ಪ್ರಯತ್ನಿಸಿದಳು, ಆದರೆ ಅವನು ಗಮನಕೊಡುವಂತೆ ಕಾಣಿಸಲಿಲ್ಲ.'ಆ ನಾಯಿ ನಮ್ಮ ಮನೆಗೆ ಬರದಿದ್ದರೆ ಆಯಿತು' ಎಂದ.

'ಆದರೆ, ಅದು ಅಹೋರಾತ್ರಿ ಅರಚುವುದು ಮತ್ತು ಬೊಗಳುವುದು ನಿನಗೆ ಕೇಳಿಸುವುದಿಲ್ಲವೇ?'ಎಂದು ಅವಳು ಗೊಣಗಿದಳು.

'ಓ, ಬಹುಶಃ ಅದಕ್ಕೆ ಹೊಸ ಮನೆ ಇನ್ನೂ ಅಭ್ಯಾಸವಾಗಿಲ್ಲ, ತನ್ನ ತಾಯಿಯಿಂದ ದೂರವಾಗಿದೆ. ಬೊಗಳುತ್ತದೆ'.

ಆದರೆ, ಇದರಿಂದ ಅವಳಿಗೆ ಯಾವ ವಿಧವಾದ ಸಮಾಧಾನವೂ ಆಗಲಿಲ್ಲ. ಝುಲೇಲಳು ನಾಯಿಮರಿಯೊಡನೆ ಆಟವಾಡಲು ಹೋಗುವಳೆಂದು ಅವಳಿಗೆ ಭಯವಾಯಿತು. ಕೊನೆಗೆ, ಝುಲೇಲ ಮೇಲಿಂಗ್ ಮನೆಗೆ ಹೋಗುವುದಕ್ಕೆ ಅಡ್ಡಿ ಮಾಡಬೇಕೆಂದು ನಿಶ್ಚಯಿಸಿದಳು.

'ಆದರೆ, ನಾನು ಅಲ್ಲಿಗೆ ಏಕೆ ಹೋಗಬಾರದು?' ಝುಲೇಲ ಕೇಳಿದಳು.

'ನಾಯಿಮರಿಗೋಸ್ಕರ'.

'ಅದರಲ್ಲಿ ತಪ್ಪೇನಿದೆ? ನಾನು ಅದರೊಡನೆ ಆಟವಾಡುವುದಿಲ್ಲ'.

'ನನಗೆ ಗೊತ್ತು ಮಗೂ, ನಮ್ಮ ಧರ್ಮ ನಾಯಿಯನ್ನು ಮುಟ್ಟುವುದಕ್ಕೆ ಕೂಡಾ ಅಡ್ಡಿಪಡಿಸುತ್ತದೆ'.

ನಿರುತ್ಸಾಹಿತಳಾದ, ಝುಲೇಲಗೆ ಯಾವ ಉತ್ತರವನ್ನೂ ಯೋಚಿಸಲಾಗಲಿಲ್ಲ, ಆದರೆ ಅದಾದ ಮೇಲೆ ಗುಟ್ಟಾಗಿ ಮೇಲಿಂಗ್ ಮನೆಗೆ ಇನ್ನೂ ಹೋಗುತ್ತಲೇ ಇದ್ದಳು.

ಒಂದು ಸಂಜೆ ಝುಲೇಲ ಓಡುತ್ತಾ ಮನೆಯೊಳಗೆ ಬಂದು ಮನೆಯ ಹಿಂದುಗಡೆಗೆ ಆತುರದಿಂದ ಹೋದಳು. ಅನುಮಾನದಿಂದ, ತಾಯಿ ಅವಳನ್ನು ಹೊರಗೆ ಹಿಂಬಾಲಿಸಿದಳು. ಹುಡುಗಿ ತನ್ನ ಮೊಣಕಾಲನ್ನು ಜೋರಾಗಿ ಉಜ್ಜಿಕೊಳ್ಳುತ್ತಾ ತೊಳೆದುಕೊಳ್ಳುತ್ತಿರುವುದನ್ನು ನೋಡಿದಳು.

'ಝುಲೇಲ, ಏನಾಯಿತು?'ಆಶ್ಚರ್ಯದಿಂದ ಕೇಳಿದಳು.

'ಅಮ್ಮಾ ಜೋಹಾನ್ ನನ್ನ ಮೊಣಕಾಲನ್ನು ನೆಕ್ಕಿತು.'

ಅದನ್ನು ಕೇಳಿ ಅವಳು ಕೋಪಗೊಂಡಳು. 'ಮೇಲಿಂಗ್‌ನಿಂದ ದೂರವಿರು ಎಂದು ನಾನು ಹೇಳಲಿಲ್ಲವೇ; ನೀನೇ ನನ್ನ ಮಾತು ಕೇಳಲಿಲ್ಲ?'

'ಕ್ಷಮಿಸಮ್ಮ, ದಯವಿಟ್ಟು ಕೋಪಿಸಿಕೊಳ್ಳಬೇಡ, ನೋಡು ನಾನಾಗಲೇ ಮೊಣಕಾಲನ್ನು ತೊಳೆದುಕೊಂಡಿದ್ದೇನೆ,'ಅವಳು ಎದ್ದುನಿಂತುಕೊಂಡು ಹೇಳಿದಳು.

'ನಾನೂ ಅದನ್ನೇ ನೋಡುತ್ತಿದ್ದೇನೆ , ಆದರೆ, ಇನ್ನು ಮುಂದೆ ನೀನು ಮೇಲಿಂಗ್ ಬಳಿ ಹೋಗಕೂಡದು, ಇದೇ ಕೊನೆ'.

'ಆದರೆ, ಅಮ್ಮ, ಅವಳು ನನಗೆ ತುಂಬಾ ಒಳ್ಳೆಯ ಸ್ನೇಹಿತೆ'.

ಅಷ್ಟರಲ್ಲಿ ಮೇಲಿಂಗ್ ಕಾಣಿಸಿಕೊಂಡಳು 'ಓ, ದಯವಿಟ್ಟು ಬೇಸರ ಪಟ್ಟುಕೊಳ್ಳಬೇಡಿ', ಅವಳು ಅಂಗಲಾಚಿದಳು. 'ಜೋಹಾನ್ ಝುಲೇಲ ಜೊತೆ ಮಾತ್ರ ಆಟವಾಡಲು ಪ್ರಯತ್ನಿಸುತ್ತಿತ್ತು'.

ಆದರೆ ಝುಲೇಲಳ ತಾಯಿ ಇನ್ನೂ ಕೋಪಿಸಿಕೊಂಡರು. ಆಹಾ, ನಾಯಿಯೊಡನೆ ಆಟ; ಇದು ಧರ್ಮಕ್ಕೆ ವಿರೋಧವಾದ್ದೆಂದು ಇಬ್ಬರಿಗೂ ಗೊತ್ತಿದೆ. ನಾಯಿ ನಿನ್ನನ್ನು ಮುಟ್ಟಿದರೆ ದೇಹದ ಆ ಭಾಗವನ್ನು ಮಣ್ಣು ನೀರಿನಲ್ಲಿ ಒಂದು ಸಲ, ಮತ್ತೆ ಒಳ್ಳೆಯ ನೀರಿನಲ್ಲಿ ಆರು ಸಲ ತೊಳೆದುಕೊಳ್ಳಬೇಕು'.

'ಆದರೆ, ಜೋಹಾನ್ ಚೊಕ್ಕಟವಾಗಿದೆ' ಮೇಲಿಂಗ್ ವಿರೋಧಿಸಿದಳು. ನಾನು ಅದಕ್ಕೆ ಪ್ರತಿದಿನ ಸ್ನಾನ ಮಾಡಿಸುತ್ತೇನೆ. ಅದು ಒಂದು ಚೂರು ಕೂಡಾ ಕೊಳಕಾಗಿಲ್ಲ. ಅದರ ಕಡೆ ಸ್ವಲ್ಪ ನೋಡಿ' ಅವಳ ಹಿಂದೆ ಬಂದಿದ್ದ ಜೋಹಾನ್ ಕಡೆ ತೋರಿಸುತ್ತಾ ಅವಳು ಹೇಳಿದಳು.

'ಅದರ ದೇಹ ಚೊಕ್ಕಟವಾಗಿದೆ ಎಂಬುದು ನನಗೆ ಗೊತ್ತು, ಆದರೆ, ನಮಗದು ಕೊಳಕು ಪ್ರಾಣಿ ಅಷ್ಟೇ.'

ಜೋಹಾನ್‌ನನ್ನು ರಕ್ಷಿಸಲು ಮೇಲಿಂಗ್‌ಗೆ ಮತ್ತೇನೂ ದಾರಿ ತೋರಲಿಲ್ಲ. ಝುಲೇಲಳ ತಾಯಿ ಏನು ಹೇಳಬೇಕೆಂದು ಪ್ರಯತ್ನಿಸುತ್ತಿದ್ದಾಳೆ ಎಂಬುದು ಕೂಡ ಅವಳಿಗೆ ಅರ್ಥವಾಗಲಿಲ್ಲ. ಜೋಹಾನ್ ಕೊಳಕು ಎಂದು ಬೈಯ್ಯಿಸಿಕೊಳ್ಳುವುದು ತನಗೆ ಇಷ್ಟವಿಲ್ಲವೆಂಬುದು ಮಾತ್ರ ಅವಳಿಗೆ ಗೊತ್ತು.

ಕೂಡಲೇ ನಾಯಿಯು ಅಂಗಳದ ಸುತ್ತಲೂ ಬಾಲವನ್ನು ಅಲ್ಲಾಡಿಸುತ್ತಾ ಆಟಕ್ಕಾಗಿ ಬೊಗಳುತ್ತಾ ಓಡಲು ಪ್ರಾರಂಭಿಸಿತು.'ಓ, ಬೇಡ; ಆ ನಾಯಿಯನ್ನು ಇಲ್ಲಿಂದ ಹೊರಗೆ ತೆಗೆದುಕೊಂಡು ಹೋಗು, ಒಳಗೆ ಬಿಡಬೇಡ' ಎಂದು ಝುಲೇಲಳ ತಾಯಿ ಬೇಸರದಿಂದ ಕೂಗಿದಳು.

ತಾನು ಕೇಳಿದ್ದನ್ನು ಮೇಲಿಂಗ್‌ಗೆ ನಂಬಲಾಗಲಿಲ್ಲ. ಅದು ಅವಳಿಗೆ ಭಯವನ್ನುಂಟು ಮಾಡಿತು. ಏನೂ ತೋಚದೆ ಅವಳು ಅಂಗಳದಿಂದ ಜೋಹಾನ್‌ಅನ್ನು ತನ್ನ ಹಿಂದೆ ಓಡಿಸಿಕೊಂಡು ಓಡಿದಳು. ಮನೆಗೆ ಹೋದೊಡನೆಯೇ ತನ್ನ ತಾಯಿಗೆ ನಡೆದದ್ದೆಲ್ಲವನ್ನೂ ಹೇಳಿದಳು.

'ಮೇಲಿಂಗ್, ಆ ಜನಗಳ ಧರ್ಮ ನಾಯಿಗಳೊಡನೆ ಆಟವಾಡಲು ಬಿಡುವುದಿಲ್ಲೆಂಬುದು ನಿನಗೆ ಗೊತ್ತು', ಎಂದು ತಾಯಿ ಅವಳನ್ನು ಸಮಾಧಾನಪಡಿಸಿದಳು.

'ಆದರೆ, ಅವಳು ನನ್ನ ನಾಯಿ ಕೊಳಕು ಎಂದು ಏಕೆ ಬೈದಳು? ನಾನು ಅದನ್ನು ತುಂಬಾ ಚೊಕ್ಕಟವಾಗಿಡುತ್ತೇನೆ.' ಮೇಲಿಂಗ್ ಕಣ್ಣೀರು ಸುರಿಸುತ್ತಾ ವಾದಿಸಿದಳು. ಅವಳ ತಾಯಿ ಏನೂ ಹೇಳಲಿಲ್ಲ.

ತಾಯಿ ಎಚ್ಚರಿಕೆ ಕೊಟ್ಟ ಮೇಲೂ, ಝುಲೇಲ ಇನ್ನೂ ಮೇಲಿಂಗ್ ಬಳಿ ಹೋಗುತ್ತಲೇ ಇದ್ದಳು. ಸ್ನೇಹ ಅವರಿಗೆ ತುಂಬಾ ಮುಖ್ಯವಾಗಿದ್ದುದರಿಂದ ಇತ್ತೀಚಿನ ಘಟನೆಯಿಂದ ಕೂಡಾ ಈ ಹುಡುಗಿಯರು ಸ್ವಲ್ಪವೂ ತಲೆಕೆಡಿಸಿಕೊಂಡಂತೆ ಕಾಣಲಿಲ್ಲ. ಮೇಲಿಂಗ್ ಜೋಹಾನ್‌ಅನ್ನು ತುಂಬಾ ಪ್ರೀತಿಸುತ್ತಾಳೆಂದು ಝುಲೇಲ ಅರ್ಥಮಾಡಿಕೊಂಡಳು.



ಜೋಹಾನ್ ನೆರೆಹೊರೆಗೆ ತೊಂದರೆಯಾಗಿ ಮುಂದುವರಿಯಿತು. ಅದು ರಾತ್ರಿಯೆಲ್ಲಾ ಬೊಗಳುವುದು, ಬೆಕ್ಕುಗಳನ್ನು ಅಟ್ಟಿಸಿಕೊಂಡು ಹೋಗುವುದು, ಯಾವಾಗಲೂ ತುಂಬಾ ಗಲಾಟೆ ಮಾಡುವುದು ಸಾಮಾನ್ಯವಾಗಿತ್ತು.

ಒಂದು ಭಾನುವಾರ ಮಧ್ಯಾಹ್ನ ಮೇಲಿಂಗ್ ಝುಲೇಲ ಜೊತೆ ಆಟವಾಡಲು ಹೋದಳು, ಆ ಇಬ್ಬರು ಹುಡುಗಿಯರೂ ಅಲ್ಲಿ ಕುಳಿತಿದ್ದಾಗ, ಜೋಹಾನ್ ಬಂದು ಮುಂದಿನ ಬಾಗಿಲ ಬಳಿ ನಿಂತುಕೊಂಡಿತು. ಝುಲೇಲಳ ಬೆಕ್ಕು, ಕೋರೆಂಗ್ ಮನೆಯ ಹೊರಗೆ ಬಂದು ಹುಡುಗಿಯೊಡನೆ ಸೇರಿಕೊಂಡಿತು. ಕೂಡಲೇ ಜೋಹಾನ್ ಅಂಗಳದಲ್ಲಿ ನೇರವಾಗಿ ಬೆಕ್ಕಿಗಾಗಿ ನುಗ್ಗಿತು. ಹೆದರಿಕೆಯಿಂದ ಹಾರಿ, ಕೋರೆಂಗ್ ಮನೆಯೊಳಗೆ ಓಡಿತು. ಜೋಹಾನ್ ಹಿಂಬಾಲಿಸಿತು. ಒಳಗಡೆ ಕೋರೆಂಗ್ ಟೆಲಿವಿಷನ್ ಸೆಟ್ ಮೇಲೆ ಹಾರಿತು, ಆಗ ಹೂದಾನಿ ನೆಲದ ಮೇಲೆ ಬಿದ್ದು ಚೂರುಚೂರಾಯಿತು.

ಶಬ್ದವನ್ನು ಕೇಳಿ, ಝುಲೇಲ ತಾಯಿ ಕೊಠಡಿಯೊಳಗೆ ಓಡಿ ಬಂದಳು, 'ಓ

ಇಷ್ಟೊಂದು. ಸುಂದರ ಹೂದಾನಿಗೆ ಏನಾಯಿತು?' ಎಂದು ಅಬ್ಬರಿಸಿದಳು.

ಜೋಹಾನ್ ಗುರ್ರೆನ್ನುತ್ತಾ ಪಡಸಾಲೆಯಲ್ಲಿ ನಿಂತಿತ್ತು. ಅದನ್ನು ನೋಡಿ, ಆ ಹೆಂಗಸು ಪೊರಕೆಯನ್ನು ತೆಗೆದುಕೊಂಡು ಹೊಡೆಯಲು ಪ್ರಾರಂಭಿಸಿದಳು. ನೋವಿನಿಂದ ಕಿರಿಚುತ್ತಾ, ಅದು ಮನೆಯಿಂದ ಹೊರಗೆ ಓಡಿತು.

ಮೇಲಿಂಗ್ ಅಸಹಾಯಕಳಾಗಿ, ಕಣ್ಣೀರು ಸುರಿಸುತ್ತಾ ನಿಂತಿದ್ದಳು, ಏನೂ ಹೇಳದೆ, ಅವಳು ಅಂಗಳದಿಂದ ಹೊರಗೆ ಜೋಹಾನ್ ಹಿಂದೆ ಓಡಿದಳು. ಝುಲೇಲ ಕೂಡಾ ಏನು ಮಾಡುವುದಕ್ಕೂ ತೋರದೆ ಸ್ತಬ್ಧಳಾದಳು. ತನ್ನ ತಾಯಿ ತುಂಬಾ ಕೋಪಿಸಿಕೊಂಡಿರುವಳೆಂದು ಅವಳಿಗೆ ಗೊತ್ತಿತ್ತು. ಇನ್ನು ಮುಂದೆ ಮೇಲಿಂಗನ್ನು ನೋಡಲು ಅವಳನ್ನು ಬಿಡುವುದೇ ಇಲ್ಲ, ಕೇವಲ ಜೋಹಾನ್‌ನ ದೆಸೆಯಿಂದ ಎಂದುಕೊಂಡಳು.

ರಾತ್ರಿ ಮೇಲಿಂಗ್‌ನ ತಂದೆ ಮನೆಗೆ ಬಂದ ಮೇಲೆ, ಅವನು ತನ್ನ ಮಗಳು ಕಣ್ಣೀರು ಸುರಿಸುತ್ತಿರುವುದನ್ನು ನೋಡಿದನು. ಅಳುವಿನ ಮಧ್ಯೆ ಅವಳು ನಡೆದದ್ದನ್ನೆಲ್ಲಾ ಹೇಳಿದಳು.

'ಜೋಹಾನ್ ಬೆಕ್ಕನ್ನು ಅಟ್ಟಿಸಿಕೊಂಡು ಹೋಗಿ ಹೂದಾನಿಯನ್ನು ಒಡೆದದ್ದರಿಂದ ತಾಯಿ ಸಹಜವಾಗಿಯೇ ಕೋಪಿಸಿಕೊಂಡಿರುವಳು' – ತಂದೆ ಹೇಳಿದರು.

'ನಾವು ಈಗೇನು ಮಾಡಬೇಕು?' ಮೇಲಿಂಗ್ ತಾಯಿ ಕೇಳಿದಳು.

'ನನಗೆ ಗೊತ್ತಿಲ್ಲ. ಅವಳು ಸ್ವಲ್ಪ ಕಾಲ ಝುಲೇಲ ಮನೆಯಿಂದ ದೂರ ಇರುವುದು ಒಳ್ಳೆಯದು'. ಎಂದು ಅವನು ಮನಸ್ಸಿಲ್ಲದೆ ಉತ್ತರಕೊಟ್ಟನು.

ಮೇಲಿಂಗ್ ತೆಪ್ಪಗಾದಳು. ಅವಳ ತಂದೆಯ ಮಾತುಗಳು ಅವಳಿಗೆ ತುಂಬಾ ಅಶ್ಚರ್ಯವನ್ನುಂಟುಮಾಡಿದುವು. ತನ್ನಕೊಠಡಿಗೆ ಓಡಿದಳು. ನಡೆದ ಎಲ್ಲಾ ವಿಷಯಗಳ ಬಗ್ಗೆ ಮತ್ತೂ ದುಃಖಿತಳಾದಳು.

ಆ ರಾತ್ರಿ ಝುಲೇಲಗೆ ನಿದ್ರೆಮಾಡಲು ಆಗಲಿಲ್ಲ. ಜೋಹಾನ್ ದೆಸೆಯಿಂದ ಮೇಲಿಂಗ್‌ನೊಡನೆಯ ಅವಳ ಸ್ನೇಹ ಹಾಳಾಯಿತು ಎಂದು ಯೋಚಿಸುತ್ತಲೇ ಇದ್ದಳು. ಆ ನಾಯಿಯನ್ನು ಓಡಿಸಿಬಿಡು ಎಂದು ನಾನು ಅವಳಿಗೆ ಹೇಳಬೇಕು ಎಂದು ಯೋಚಿಸಿದಳು. ಆದರೆ, ಇಲ್ಲ, ತನ್ನ ಸ್ನೇಹಿತೆಗೆ ಹಾಗೆ ಹೇಳಲಾಗುವುದಿಲ್ಲವೆಂಬುದು ಅವಳಿಗೆ ಗೊತ್ತಿತ್ತು. ಏಕೆಂದರೆ ಮೇಲಿಂಗ್ ಆ ನಾಯಿಯನ್ನು ತುಂಬಾ ಪ್ರೀತಿಸುತ್ತಿದ್ದಳು. ಝುಲೇಲಗೆ ಮೇಲಿಂಗ್‌ನನ್ನು ಕಳೆದುಕೊಳ್ಳುವುದು ಇಷ್ಟವಿರಲಿಲ್ಲ, ಹಾಗೆಯೇ ಸ್ನೇಹಿತೆ ಜೋಹಾನ್‌ಅನ್ನು ಕಳೆದುಕೊಳ್ಳಲು ಕೂಡಾ ಇಷ್ಟಪಡುವುದಿಲ್ಲ ಎಂಬುದು ಅವಳಿಗೆ ಗೊತ್ತಿತ್ತು.

ಈ ಮಧ್ಯೆ, ಜೋಹಾನ್ ಬೊಗಳುವುದು ಮುಂದುವರಿಯಿತು, ಆದರೆ ಈಗ ಅದು ಹೆಚ್ಚು ವಿಚಿತ್ರವಾಗಿ ಶಬ್ದ ಮಾಡುತ್ತಿತ್ತು. ಮೊದಲು ಅದು ಮೆಲ್ಲಗೆ ಕಿರಿಚುವುದು, ಆಮೇಲೆ ಗುರ್ರೆನ್ನುವುದು ಮತ್ತೆ ಬೊಗಳುವುದು. ಕೊನೆಗೆ

ಅರಚುವುದು. ಅರಚುವಿಕೆ ವಿಲಕ್ಷಣವಾಗಿ, ಭಯಹುಟ್ಟಿಸುವಂತಿತ್ತು. ಜೋಹಾನ್‌ಗೆ ಖಾಯಿಲೆಯಾಗಿದೆಯೆಂದು ಮೇಲಿಂಗ್ ತುಂಬಾ ಚಿಂತಿತಳಾದಳು. ಅವಳ ತಂದೆ ಅದಕ್ಕೆ ಏನೂ ಅಗಿಲ್ಲವೆಂದು ಧೈರ್ಯಕೊಟ್ಟರು.

ಪ್ರತಿ ರಾತ್ರಿ ಜೋಹಾನ್‌ನ ವಿಚಿತ್ರ ಬೊಗಳುವಿಕೆ ಮತ್ತು ಅರಚುವಿಕೆ ಮುಂದುವರಿಯಿತು. ಇದರಿಂದ ನೆರೆಹೊರೆಯವರಿಗೆ ಅಸಮಾಧಾನವಾಯಿತು.ಏಕೆಂದರೆ ಇದೊಂದು ಕೆಟ್ಟ ಶಕುನ ಎಂದು ಅವರು ಭಾವಿಸಿದರು. ನಾಯಿಯಾಗಲೀ ಅಥವಾ ಅದರ ಯಜಮಾನನಾಗಲೀ ಏನಾದರೂ ಭಾರಿಯಾದ ವಿಪತ್ತನ್ನು ಎದುರಿಸಬೇಕಾಗುವುದು ಎಂಬ ವದಂತಿ ಎಲ್ಲಾ ಕಡೆಯೂ ಹರಡಲಾರಂಭಿಸಿತು. ಇದನ್ನು ಕೇಳಿ ಮೇಲಿಂಗ್‌ಗೆ ಇನ್ನೂ ದುಃಖವಾಯಿತು.

ಈ ಅವಧಿಯಲ್ಲಿ ಮೇಲಿಂಗ್ ಮತ್ತು ಝುಲೇಲ ಒಬ್ಬರನ್ನೊಬ್ಬರು ಸಂಧಿಸಲಿಲ್ಲ, ಒಬ್ಬರನ್ನೊಬ್ಬರು ಶಾಲೆಯಲ್ಲಿ ಕಂಡರೂ ಮಾತನಾಡಲಿಲ್ಲ, ಮನೆಗೆ ಬೇರೆ ಬೇರೆ ಹೋಗುತ್ತಿದ್ದರು. ಕೊನೆಗೆ ಒಂದು ದಿನ ಝುಲೇಲ ತನ್ನ ಸ್ನೇಹಿತೆಯೊಡನೆ ಮಾತನಾಡಲು ಸಾಕಷ್ಟು ಧೈರ್ಯ ಮಾಡಿದಳು. ಮೇಲಿಂಗ್ ಬಳಿ ಹೋಗಿ ಕೇಳಿದಳು 'ನೀನು ನನ್ನ ಸ್ನೇಹಿತೆಯಾಗಲು ಇಷ್ಟಪಡುವುದಿಲ್ಲವೇ?'

'ಖಂಡಿತ ಇಷ್ಟಪಡುತ್ತೇನೆ. ಆದರೆ ನಾವಿಬ್ಬರೂ ಭೇಟಿಯಾಗಲು ಸಾಧ್ಯವಿಲ್ಲವೆಂಬುದು ನಿನಗೆ ಗೊತ್ತು'.

'ಎಲ್ಲಾ ಜೋಹಾನ್ ದೆಸೆಯಿಂದ'.

'ನನಗೆ ಗೊತ್ತು, ಆದರೆ ನಮಗೇನು ಮಾಡಲು ಸಾಧ್ಯ?'

'ಮತ್ತೆ......?'

'ಏನು ಮತ್ತೆ?......'

'ನಾನು ಏನಾದರೂ ಹೇಳಿದರೆ ನೀನಗೆ ಬೇಸರವಾಗುವುದಿಲ್ಲ ತಾನೆ?'

'ಖಂಡಿತ ಇಲ್ಲ, ನಾವು ಸ್ನೇಹಿತೆಯರಲ್ಲವೆ?'

'ಒಳ್ಳೆಯದು, ಹಾಗಾದರೆ, ಮೇಲಿಂಗ್ ನೀನು ಅದನ್ನು ಕಟ್ಟಿಹಾಕಿಕೊಳ್ಳಬೇಕು, ಎಂದು ನನಗನಿಸುತ್ತದೆ.'

'ಕಟ್ಟಿಹಾಕಿ?'

'ಹೌದು, ಸರಪಣಿ ಹಾಕಿ ಕಟ್ಟಿ ನಿನ್ನ ಅಂಗಳದಲ್ಲಿ ಇಟ್ಟುಕೊ, ಆಗ ನಾವು ಪುನಃ ಒಬ್ಬರನ್ನೊಬ್ಬರು ಭೇಟಿಯಾಗಬಹುದು.'

'ಆದರೆ, ಅದಕ್ಕೆ ಇಷ್ಟವಾಗುವುದಿಲ್ಲವೆಂದು ನನಗೆ ಅನ್ನಿಸುತ್ತೆ. ತನಗೆ ಇಷ್ಟಬಂದಂತೆ ಸುತ್ತಲೂ ಸ್ವತಂತ್ರವಾಗಿ ಓಡಾಡುವುದು ಅದಕ್ಕೆ ಯಾವಾಗಲೂ ಅಭ್ಯಾಸವಾಗಿ ಬಿಟ್ಟಿದೆ. ಈಗ ನಾನು ಅದನ್ನು ಕಟ್ಟಿಹಾಕಿದರೆ, ಅದು ಇನ್ನೂ ಹೆಚ್ಚಾಗಿ ಬೊಗಳುತ್ತದೆ.'

'ನಾವು ಒಬ್ಬರನ್ನೊಬ್ಬರು ಭೇಟಿಯಾಗುವುದು ಸಾಧ್ಯವಾದರೆ, ಇದರಿಂದ ತೊಂದರೆಯಾಗುವುದೇ?'

'ಆದರೆ, ಅದು ನೆರೆಹೊರೆಯವರನ್ನು ಇನ್ನೂ ಕೋಪಗೊಳ್ಳುವಂತೆ ಮಾಡುತ್ತದೆ. ಅವರು ಬಹುಶಃ ಇದನ್ನು ಕೊಲ್ಲುವರು'.

'ಹುಚ್ಚಳಂತಾಡಬೇಡ. ಅವರು ಇದನ್ನು ಕೊಲ್ಲಲಾಗುವುದಿಲ್ಲ. ಸ್ವಲ್ಪ ಕಾಲದ ನಂತರ ಅದು ಕಟ್ಟಿಸಿಕೊಂಡು ಇರುವುದನ್ನು ಅಭ್ಯಾಸ ಮಾಡಿಕೊಳ್ಳುವುದು, ಹಾಗೇ, ಅದು ಸ್ವತಂತ್ರವಾಗಿದ್ದಾಗ್ಯೂ ಬೊಗಳುತ್ತಿರುತ್ತದೆ'.

ಮೇಲಿಂಗ್ ಸ್ವಲ್ಪ ಕಾಲ ಯೋಚಿಸಿ ಕೊನೆಗೆ ಉತ್ತರಕೊಟ್ಟಳು; 'ಹಾಗೇ ಆಗಲಿ, ಇವತ್ತು ರಾತ್ರಿ ಅದನ್ನು ಕಟ್ಟಿಹಾಕಿ ಪ್ರಯತ್ನಿಸುತ್ತೇನೆ. ಮತ್ತೆ ಏನಾಗುವುದು ನೋಡೋಣ'.

ಇಬ್ಬರು ಹುಡುಗಿಯರು ನಕ್ಕು ಮನೆಕಡೆ ಒಬ್ಬರ ಕೈ ಒಬ್ಬರು ಹಿಡಿದುಕೊಂಡು ಹೋದರು.

ಆ ರಾತ್ರಿ ಮೇಲಿಂಗ್ ಜೋಹಾನ್‌ನನ್ನು ಗೂಡಿನ ಕೆಳಗೆ ಕಟ್ಟಿ ಹಾಕಿದಳು. ಆದರೆ ನಾಯಿ ಒಂದೇ ಸಮನೆ ಬೊಗಳಿತು. ಇದರಿಂದ ದುಃಖಗೊಂಡು ಆ ಹುಡುಗಿ ಅದನ್ನು ನೋಡಲು ಮನೆಯಿಂದ ಹೊರಗೆ ಹೋಗುತ್ತಲೇ ಇದ್ದಳು, ಅದರ ತಲೆ ಮತ್ತು ಬೆನ್ನನ್ನು ಸವರುತ್ತಲೇ ಇದ್ದಳು.'ಅಳಬೇಡ ಚಿನ್ನಾ, ನಾನು ಇದನ್ನು ನಿನ್ನ ಒಳ್ಳೆಯದಕ್ಕಾಗಿಯೇ ಮಾಡಿದ್ದೇನೆ. ಹೀಗಿದ್ದರೆ ಯಾರೂ ನಿನ್ನನ್ನು



ಪುನಃ ಪೊರಕೆಯಿಂದ ಹೊಡೆಯುವುದಿಲ್ಲ. ಮತ್ತೆ ಈಗ ಝುಲೇಲ ಮತ್ತು ನಾನು ಸ್ನೇಹಿತೆಯರಾಗಬಹುದು'. ಆದರೆ ಜೋಹಾನ್ ಹಾಗೇ ಅಳುವ ಶಬ್ದ ಮಾಡಿ ಅವಳ ಮುಖವನ್ನು ನೆಕ್ಕಿತು.

ಅವಳು ಅದನ್ನು ಸಮಾಧಾನ ಮಾಡಿದ ಕೂಡಲೇ ಅದರ ಬೊಗಳುವಿಕೆ ಪುನಃ ಪ್ರಾರಂಭವಾಗುವುದು, ಜೋರಾಗಿ ಗುರ್ರೆನ್ನುವುದು, ಆಗ ಮೇಲಿಂಗ್ ಅದರ ಹತ್ತಿರ ಪುನಃ ಓಡಿಹೋಗುವಳು. ಅವಳ ತಂದೆ–ತಾಯಿ ಏನು ಹೇಳುವುದಕ್ಕೂ ಹೆದರಿ ಮೌನವಾಗಿ ನೋಡುತ್ತಿದ್ದರು.

ಮೇಲಿಂಗ್ ಐದು ಸಲ ನಾಯಿಯನ್ನು ಸಮಾಧಾನ ಮಾಡಲು ಹೊರಗೆ ಹೋಗಿದ್ದಳು. ಆಯಾಸಗೊಂಡು ಹಾಗೂ ಬೇಸರಗೊಂಡು, ಅದನ್ನು ಸ್ವತಂತ್ರವಾಗಿ ಬಿಟ್ಟುಬಿಡಬೇಕೆಂದು ನಿಶ್ಚಯಿಸಿದಳು. 'ಒಳ್ಳೆಯದು, ನಾನು ಈಗ ನಿನ್ನನ್ನು ಬಿಟ್ಟು ಬಿಡುವೆ, ನೀನು ಶಾಂತವಾಗಿರುವೆ ಹಾಗೂ ಎಲ್ಲೂ ಹೋಗುವುದಿಲ್ಲ ಎಂದು ಮಾತು ಕೊಡು'. ಅವಳು ಹೇಳಿದ್ದು ತಿಳಿಯಿತೋ ಎಂಬಂತೆ ಅದು ಕುಂಯ್ಗುಟ್ಟಿತು; ಮೆಲ್ಲಗೆ ಗುರ್ರ್ ಎಂದು ರಸ್ತೆ ಕಡೆ ನೋಡಿತು.

'ಹೇ ಏನು? ಸುಮ್ಮನಿರು, ನಾನು ನಿನ್ನನ್ನು ಬಿಡುತ್ತೇನೆ, ಆದರೆ ಸುತ್ತಲೂ ಸುತ್ತಾಡಬೇಡ' ಎಂದು ಹೇಳುತ್ತಾ ಅದನ್ನು ಬಿಚ್ಚಿದಳು. ಅವಳು ಮನೆಗೆ ಹಿಂತಿರುಗಿ ಹೋದಾಗ ಅದು ರಸ್ತೆ ನೋಡುತ್ತಾ ಕುಳಿತಿತ್ತು.

ದೂರದಲ್ಲಿ ಕೆಲವು ಕಪ್ಪೆಗಳ ವಟ ವಟ ಶಬ್ದ ಬಿಟ್ಟು, ರಾತ್ರಿಯೆಲ್ಲಾ ನಿಶ್ಶಬ್ದವಾಗಿತ್ತು; ಕೂಡಲೇ ಮಳೆಯಾಗಲು ಪ್ರಾರಂಭವಾಯಿತು. ಮೇಲಿಂಗ್ ಮೆಲ್ಲನೆ ಪ್ರಯಾಸದಿಂದ ನಿದ್ರೆ ಹೋದಳು. ಝುಲೇಲ ಮತ್ತು ಜೋಹಾನ್ ಜೊತೆ ತಾನು ಇರುವಂತೆ, ಮೂವರೂ ಕೊನೆಯಿಲ್ಲದೆ ತಿರುಗಾಡುತ್ತಿರುವಂತೆ ಅವಳು ಕನಸು ಕಂಡಳು. ಅವರು ಒಂದು ಹಳ್ಳದ ಹತ್ತಿರ ಬಂದರು. ಅವಳು ಮೇಲಿನಿಂದ ನೋಡಿದಳು, ಕತ್ತಲಾಗಿತ್ತು, ಆ ಹಳ್ಳ ಆಳವಾಗಿತ್ತು, ಕೂಡಲೇ ಜೋಹಾನ್ ಜಾರಿ ದಟ್ಟವಾದ ಕತ್ತಲಿನಲ್ಲಿ ಹಳ್ಳಕ್ಕೆ ಬಿದ್ದುಬಿಟ್ಟಿತು.

ಮೇಲಿಂಗ್ ಕಿರಿಚುತ್ತಾ ಮೇಲೆದ್ದು ಹೊರ ಬಂದು ಹಿತ್ತಲಿಗೆ ಓಡಿದಳು ಆದರೆ ಜೋಹಾನ್ ಅಲ್ಲಿರಲಿಲ್ಲ. ಅವಳ ತಂದೆ ತಾಯಿಯರು ಓಡುತ್ತಾ ಹೊರಗೆ ಬಂದರು. ಆಗ ಬೆಳಗಿನಜಾವವಾಗಿತ್ತು, ಜೋಹಾನ್ ಎಲ್ಲೂ ಕಾಣುತ್ತಿರಲಿಲ್ಲ. ಮೂವರೂ ಹಿತ್ತಲಿನಲ್ಲಿ ಹುಡುಕಿದರು, ನಾಯಿಯ ಸುಳಿವಿರಲಿಲ್ಲ.' ಜೋಹಾನ್, ಜೊಹಾನ್' ಎಂದು ಕೂಗುತ್ತಾ ಮೇಲಿಂಗ್ ನೆರೆಹೊರೆಯಲ್ಲಿ ಹುಡುಕಿದಳು. ಆದರೆ ಅದರ ಸುಳಿವೇ ಇರಲಿಲ್ಲ. ಅವಳು ಮನೆಗೆ ವಾಪಸು ಬಂದು ಜೋಹಾನ್ ನಿದ್ರೆ ಮಾಡುತ್ತಿದ್ದ ಗೂಡಿನ ಬಳಿ ಕುಳಿತುಕೊಂಡಳು. ಅದನ್ನು ಕಟ್ಟಿಹಾಕದಿದ್ದರೆ ಹೀಗೆ ಆಗುತ್ತಿರಲಿಲ್ಲ. ಎಂದು ತನ್ನಷ್ಟಕ್ಕೆತಾನೇ ಅಂದುಕೊಂಡಳು. ಅದು ಇದನ್ನು ದ್ವೇಷಿಸಿತು. ಅದರಿಂದಲೇ ಅದು ಓಡಿ ಹೋಗುವಂತಾಯಿತು'.

ಅವಳ ತಾಯಿ ಸಮಾಧಾನಮಾಡುತ್ತಾ ಹೇಳಿದಳು 'ಮಗೂ, ದುಃಖಿಸಬೇಡ ಬೇಗನೆ ನಿನಗೆ ಇನ್ನೊಂದು ನಾಯಿಯನ್ನು ತಂದು ಕೊಡುವೆವು'.

'ಆದರೆ, ಅದು ಜೋಹಾನ್‌ಅಷ್ಟು ಒಳ್ಳೆಯದಾಗಿರುವುದಿಲ್ಲ. ನನಗೆ ಇನ್ನೊಂದು ನಾಯಿ ಬೇಡ, ನಾನು ಹೊರಗೆ ಜೋಹಾನ್‌ಅನ್ನು ಹುಡುಕುತ್ತೇನೆ. ಅದು ಸತ್ತಿಲ್ಲವೆಂದು ಮಾತ್ರ ನನಗೆ ಗೊತ್ತು.'

ನಡೆದ ವಿಷಯ ನೆರೆಹೊರೆಯಲ್ಲಿ ಬೇಗನೆ ಹರಡಿತು. ಝುಲೇಲ ಇದನ್ನು ಕೇಳಿದ ಕೂಡಲೇ ತನ್ನ ಸ್ನೇಹಿತೆಯ ಮನೆಗೆ ಹೋದಳು. ಮೇಲಿಂಗ್ ಅವಳನ್ನು ನೋಡಿದೊಡನೆಯೇ ಝುಲೇಲಳನ್ನು ತಬ್ಬಿಕೊಂಡು ಅಳಲು ಪ್ರಾರಂಭಿಸಿದಳು.

'ದಯವಿಟ್ಟು ಅಳಬೇಡ, ಮೇಲಿಂಗ್,' ಝುಲೇಲ ಹೇಳಿದಳು, ಆದರೆ ಅವಳಿಗೂ ದುಃಖವಾಗಿತ್ತು.

'ಓ, ಅದು ಸತ್ತಿದೆ ಎಂದು ನನಗೆ ಗೊತ್ತು'.

'ಇಲ್ಲ, ಸತ್ತಿಲ್ಲ, ಅದು ಇನ್ನೂ ಬದುಕಿದೆ ನಮಗೆ ಅದು ಸಿಗುತ್ತದೆ.'

'ಅದು ಸತ್ತಿದೆ ಎಂದು ಗೊತ್ತು; ಹಿಂದಿನ ರಾತ್ರಿ ಅದು ಒಂದು ಆಳವಾದ ಹಳ್ಳದಲ್ಲಿ ಬಿದ್ದು ಮಾಯವಾದಂತೆ ಕನಸು ಕಂಡೆನು'.

'ಹುಚ್ಚಳಂತಾಡಬೇಡ, ಈಗ ನಾವು ಅದನ್ನು ಹುಡುಕೋಣ, ನಾವು ಯಾವಾಗಲೂ ಹೊಗುತ್ತಿದ್ದ ಮೀನು ಹಿಡಿಯುವ ಜಾಗದಲ್ಲಿ ಹೊಳೆಯ ಹತ್ತಿರ ಅದು ಕುಳಿತಿರಬೇಕು'.

ಇಬ್ಬರು ಹುಡುಗಿಯರೂ ಹೊರಟರು. ಬೆಳಗ್ಗೆ ತಂಪಾಗಿತ್ತು. ಹುಲ್ಲಿನ ಮೇಲೆ ಮಂಜು ಹೊಳೆಯುತ್ತಿತ್ತು, ಪೂರ್ವದಲ್ಲಿ ಸೂರ್ಯ ನಿಧಾನವಾಗಿ ಹುಟ್ಟುತ್ತಿದ್ದನು, ಭಾನುವಾರವಾದ್ದರಿಂದ ರಸ್ತೆಯಲ್ಲಿ ವಾಹನಗಳು ಇರಲಿಲ್ಲ.

ಅವರು ಹೊಳೆ ಹತ್ತಿರ ಬಂದಾಗ ರಸ್ತೆಯ ಪಕ್ಕದಲ್ಲಿ ಏನೋ ತೇಲುತ್ತಿರುವಂತೆ ಕಂಡರು. ಮೇಲಿಂಗಳ ಹೃದಯ ಹೊಡೆದುಕೊಳ್ಳುತ್ತಿತ್ತು. ಝುಲೇಲಳನ್ನು ಬಿಟ್ಟು, ಅವಳು ಮುಂದೆ ಓಡಿದಳು. ಹೊಳೆಯ ಅಂಚಿಗೆ ಬಂದಾಗ ಅದು ಜೋಹಾನ್‌ನ ಶರೀರದಂತೆ ಕಾಣಿಸಿತು. ಅದರ ದೇಹ ತುಂಬಾ ಪೆಟ್ಟುಗಳು ಹಾಗೂ ಗಾಯಗಳಿಂದ ತುಂಬಿಕೊಂಡಿತ್ತು. ಕಾರ್‌ಗೆ ಸಿಕ್ಕಿ ಹಳ್ಳಕ್ಕೆ ಬಿದ್ದಿರಬೇಕು. ಮೇಲಿಂಗ್ ಕೂಡಾ ಮೂರ್ಛೆ ಹೋದಳು.

ಮಧ್ಯಾಹ್ನದ ಮೇಲೆ ಝುಲೇಲ ತನ್ನ ಸ್ನೇಹಿತೆಗೆ ಜೋಹಾನ್‌ಅನ್ನು ಮೇಲಿಂಗ್‌ನ ಮನೆಯ ಹಿಂದೆ ಸಮಾಧಿ ಮಾಡಲು ಸಹಾಯ ಮಾಡಿದಳು. ಅದರ ಸಮಾಧಿಯ ಹತ್ತಿರ ಹುಡುಗಿಯರು ಒಂದು ಸಣ್ಣ ಗಿಡ ನೆಟ್ಟರು. ಆಮೇಲೆ ಮೇಲಿಂಗ್ ಸಮಾಧಿಯ ಬಳಿ ಮೊಣಕಾಲೂರಿ ಗದ್ಗದಿತ ಧ್ವನಿಯಲ್ಲಿ ನುಡಿದಳು; 'ಶಾಂತವಾಗಿ ವಿಶ್ರಮಿಸು ನನ್ನ ಚಿನ್ನಾ, ಈ ಗಿಡ ಯಾವಾಗಲೂ ನಿನ್ನನ್ನು ಜ್ಞಾಪಿಸುತ್ತದೆ. ನಾನು ನೀರು ಹಾಕುತ್ತೇನೆ, ಇದು ದೊಡ್ಡದಾಗಿ ಮರವಾಗುವವರೆಗೂ ಇದನ್ನು

ನೋಡಿಕೊಳ್ಳುತ್ತೇನೆ. ಚೆನ್ನಾಗಿ ಮಲಗು, ಸದಾ ನಿನ್ನ ಸಮಾಧಿಯನ್ನು ನೋಡಿಕೊಳ್ಳುತ್ತೇನೆ'.

ಅವಳ ಪಕ್ಕದಲ್ಲಿ ಮೊಣಕಾಲೂರಿ ಕುಳಿತಿದ್ದ ಝುಲೇಲ ತನ್ನ ಸ್ನೇಹಿತೆಯ ಮಾತುಗಳಿಂದ ಕರಗಿ ಹೋದಳು. ಇಬ್ಬರು ಹುಡುಗಿಯರೂ ಅಳುತ್ತಾ, ಶಾಂತವಾಗಿ ನಿಂತಿದ್ದರು. ಕೈಯಲ್ಲಿ ಕೈಯಿಟ್ಟುಕೊಂಡು ಹಿಂದಿರುಗಿ ಹೋದರು.

ಅವರು ಮೇಲಿಂಗ್ ಮನೆಯ ಮುಂದೆ ಬಂದಾಗ, ಒಂದು ಸಣ್ಣ ಬುಟ್ಟಿಯನ್ನು ಹೊತ್ತುಕೊಂಡು ಝುಲೇಲಳ ತಾಯಿ ಬಾಗಿಲಲ್ಲಿ ಪ್ರವೇಶಿಸಿದ್ದನ್ನು ನೋಡಿದರು. ಮೇಲಿಂಗ್ ಮನೆಯಲ್ಲಿ ತಾನು ಇರುವುದನ್ನು ನೋಡಿ ತನ್ನ ತಾಯಿ ಕೋಪಿಸಿಕೊಳ್ಳುವರೆಂದು ಝುಲೇಲ ಮೊದಲು ಭಾವಿಸಿದಳು. ಆದರೆ ಅವರು ಹುಡುಗಿಯರ ಹತ್ತಿರ ಬಂದು ಮೇಲಿಂಗ್‌ಳ ಭುಜದ ಮೇಲೆ ತನ್ನ ಕೈಯನ್ನು ಇಟ್ಟು, ಮೃದುವಾಗಿ ಹೇಳಿದಳು; 'ನಿನ್ನ ಮುದ್ದು ನಾಯಿ ಸತ್ತ ಸುದ್ದಿ ಕೇಳಿದ ನನಗೆ ತುಂಬಾ ದುಃಖವಾಯಿತು. ನೀನು ಅದನ್ನು ತುಂಬಾ ಪ್ರೀತಿಸುತ್ತಿದ್ದೆಯೆಂಬುದು ನನಗೆ ಗೊತ್ತು. ನಿನ್ನ ನಾಯಿ ಇದ್ದಾಗ ಝುಲೇಲಳನ್ನು ನಿನ್ನ ಬಳಿ ಬರಲು ನಾನು ಏಕೆ ಬಿಡುತ್ತಿರಲಿಲ್ಲ ಎಂಬುದನ್ನು ದಯವಿಟ್ಟು ಅರ್ಥಮಾಡಿಕೊ. ನೀವಿಬ್ಬರೂ ನಿಮ್ಮ ಸ್ನೇಹವನ್ನು ಕಾಪಾಡಿಕೊಳ್ಳಿ. ನಿನ್ನ ನಾಯಿಯ ಸ್ಥಾನವನ್ನು ಯಾವುದೂ ತುಂಬಿಕೊಡಲಾರದು ಎಂಬುದು ನನಗೆ ಗೊತ್ತಿದೆ. ಮನೆಯಲ್ಲಿ ನಿನ್ನ ಜೊತೆಯಿರಲು ಇದನ್ನು ನಾನು ನಿನಗಾಗಿ ಕೊಂಡು ತಂದಿದ್ದೇನೆ'.

ಮಾತು ಮುಗಿಸಿದ ಮೇಲೆ ಝುಲೇಲಳ ತಾಯಿ ಮೇಲಿಂಗ್ ಕೈಗೆ ಬುಟ್ಟಿಯನ್ನು ಕೊಟ್ಟಳು. ಒಳಗೆ ನೋಡಿದಾಗ, ಅದರಲ್ಲಿ ಒಂದು ಚಿಕ್ಕ ಇನ್ನೂ ಕಣ್ಣುಗಳನ್ನು ಕೂಡಾ ತೆರೆಯದೇ ಇದ್ದ ಬೆಕ್ಕಿನ ಮರಿ ಇತ್ತು. 'ಓ, ಎಷ್ಟು ಸುಂದರವಾದ ಬೆಕ್ಕಿನ ಮರಿ' ಮೇಲಿಂಗ್ ಕೂಗಿದಳು. ಅದನ್ನು ತೆಗೆದುಕೊಂಡು ಅದರ ಕೆನ್ನೆಗಳನ್ನು ಸವರುತ್ತಾ, ಹೇಳಿದಳು; 'ನಿನ್ನನ್ನು ನೋಡಿ ಜೋಹಾನ್ ಖಂಡಿತ ಹೊಟ್ಟೆಕಿಚ್ಚು ಪಡುವುದಿಲ್ಲವೆಂಬುದು ನನಗೆ ಗೊತ್ತು. ನನಗೆ ಹೊಸ ಸ್ನೇಹಿತ ಸಿಕ್ಕಿದ್ದನ್ನು ನೋಡಿ, ಅದು ತುಂಬಾ ಸಂತೋಷಪಡುವುದು. ಈ ಚಿಕ್ಕ ಗಿಡವನ್ನು ನೋಡಿಕೊಳ್ಳಲು ನೀನು ಸಹಾಯ ಮಾಡಬೇಕು'. ತನ್ನ ಕಣ್ಣುಗಳಲ್ಲಿ ಕಣ್ಣೀರನ್ನು ತುಂಬಿಕೊಂಡು, ಝುಲೇಲ ತಾಯಿಯ ಕಡೆ ನೋಡಿದಳು. 'ಓ ಧನ್ಯವಾದಗಳು, ಧನ್ಯವಾದಗಳು, ನಾನು ಬೆಕ್ಕಿನ ಮರಿಯನ್ನು ಜೋಹಾನ್‌ಅಷ್ಟೇ ಪ್ರೀತಿಸುತ್ತೇನೆ. ಝುಲೇಲ ಹಾಗೂ ನಾನು ಯಾವಾಗಲೂ ಎಂದೆಂದಿಗೂ ಒಳ್ಳೆಯ ಸ್ನೇಹಿತರಾಗೇ ಇರುವೆವು'.

ಚಿತ್ರಗಳು: ಒಥ್‌ಮನ್ ಬಿನ್ ಹಾಜಿ ಜೈನುದ್ದೀನ್

ನೇಪಾಳ

# ಮಾಂತ್ರಿಕ ಕೊಳಲು

## ಮಾಧವ್ ಘಿಮೈರ್

ಸಣ್ಣ ಹಳ್ಳಿಯ ಒಂದು ಕೊಳಕು ರಸ್ತೆಯಲ್ಲಿ ಸುಕುಮಾರ್ ಹೋಗುತ್ತಿದ್ದಾಗ ಸೂರ್ಯ ಮುಳುಗುತ್ತಿದ್ದ. ಅವನು ಸುಮಾರು ಹತ್ತು ವರ್ಷದ ಹುಡುಗ. ದೂರದಲ್ಲಿ ತುಂಬಾ ಎತ್ತರವಾದ ಶಿಖರಗಳು ಆಗತಾನೇ ಹಿತಕರವಾದ ಕೆಂಪು ಹಾಗೂ ಚಿನ್ನದ ಬಣ್ಣದಿಂದ ಸ್ನಾನ ಮಾಡುವಂತಿದ್ದ ಭವ್ಯವಾದ ಹಿಮಾಲಯಾ ದೃಶ್ಯ ಇತ್ತು. ಸುಕುಮಾರ್ ಒಬ್ಬನೇ ಇದ್ದನು. ಅವನಿಗೆ ಹಳ್ಳಿಯಲ್ಲಿ ಯಾರೂ ಗೊತ್ತಿರಲಿಲ್ಲವಾದರೂ ಆ ರಾತ್ರಿ ತಾನು ಇಳಿದುಕೊಳ್ಳಲು ಯಾರಾದರೂ



ಸಿಗುವರೆಂದು ಆಶಿಸುತ್ತಿದ್ದನು. ದೂರದಲ್ಲಿ ಒಬ್ಬ ಹುಡುಗಿ ತನ್ನ ತಾಯಿಯನ್ನು ಕರೆಯುತ್ತಿದ್ದಾಗ ಅವನು ಸತ್ತುಹೋದ ತನ್ನ ತಾಯಿಯನ್ನು ಜ್ಞಾಪಿಸಿಕೊಂಡನು; ಅವಳ ಸ್ಮರಣೆಯಲ್ಲಿ ತಲ್ಲೀನನಾದ ಅವನು ತನ್ನ ಕೊಳಲನ್ನು ಹೊರಗೆ ತೆಗೆದು ತುಟಿಗಳಿಗೆ ಇಟ್ಟುಕೊಂಡನು, ದೂರದಲ್ಲಿ ಆ ಹುಡುಗಿ ತನ್ನ ತಾಯಿಯನ್ನು ಕರೆಯುತ್ತಿದ್ದಂತೆ ತಾನೂ ಕೂಡಾ ಒಂದು ರಾಗವನ್ನು ನುಡಿಸುವುದರಿಂದ ತನ್ನ ತಾಯಿಯನ್ನು ಕರೆಯುತ್ತಿದ್ದೇನೆ ಎಂದುಕೊಂಡನು.

ಅವನು ಅಲ್ಲಿ ಕೊಳಲು ನುಡಿಸುತ್ತಾ ನಿಂತಿದ್ದಾಗ ಭಾರವಾದ ಹೊರೆಯನ್ನು ಬೆನ್ನಿನ ಮೇಲೆ ಹೊತ್ತುಕೊಂಡು ಮಧ್ಯ ವಯಸ್ಸಿನ ಹೆಂಗಸು ಬಂದಳು. ಅವಳು ಹಳ್ಳಿಯ ಮುಖ್ಯಸ್ಥನ ಹೆಂಡತಿ. ಅವಳು ನಿಂತುಕೊಂಡು ಹುಡುಗನ ರಾಗವನ್ನು ಮೌನವಾಗಿ ಕೇಳಿದಳು. ಅವಳು ನಿಂತಿದ್ದನ್ನು ಗಮನಿಸಿ ಸುಕುಮಾರ್ ಅವಳತ್ತ ನೋಡಿದನು. ಅವರ ಕಣ್ಣುಗಳು ಸಂಧಿಸಿದಾಗ ಒಬ್ಬರೊಬ್ಬರಿಗೆ ಯಾವಾಗಲೋ ಪರಿಚಯವಿತ್ತೇನೋ ಅನ್ನಿಸಿತು.

ಅವಳು' ಮಗೂ, ನೀನು ಎಲ್ಲಿಗೆ ಹೋಗುತ್ತಿದ್ದೀಯಾ?'ಎಂದು ಕೇಳಿದಳು.

'ನಾನು ಇಲ್ಲಿಗೆ ಒಬ್ಬ ಹೊಸಬ ತಾಯಿ, ರಾತ್ರಿಯನ್ನು ಕಳೆಯಲು ಜಾಗ ನೋಡುತ್ತಿದ್ದೇನೆ', ಎಂದು ಉತ್ತರಕೊಟ್ಟನು.

ಸುಮ್ಮನೆ ಅವರು ಒಬ್ಬರನ್ನೊಬ್ಬರು ತಾಯಿ ಮತ್ತು ಮಗ ಎಂದು ಕರೆದುಕೊಂಡರೇ ಅಥವಾ ಇದಕ್ಕೇನಾದರೂ ವಿಶೇಷ ಅರ್ಥವಿತ್ತೇ?

ಅವಳಿಗೆ ಆಶ್ಚರ್ಯವಾದಂತಾಯಿತು. ಆ ಹುಡುಗನಿಗೆ ಆ ಹಳ್ಳಿಯಲ್ಲಿ ಯಾರೂ ಗೊತ್ತಿಲ್ಲದಾಗ್ಯೂ, ಬೇರೆ ನಿರ್ದಿಷ್ಟವಾದ ನೆಲೆ, ಗೊತ್ತು-ಗುರಿ ಇಲ್ಲದಿದ್ದರೂ ತನ್ನ ಕೊಳಲನ್ನು ಸಂತೋಷವಾಗಿ ಯೋಚನೆ ಇಲ್ಲದೆ ನುಡಿಸುತ್ತಾ ನಿಂತಿದ್ದನು.

'ಮಗೂ, ನನ್ನ ಜೊತೆ ಬಾ', ಅವಳು ಹೇಳಿದಳು, 'ನಿನ್ನ ಕೊಳಲಿನ ಸ್ವರದಿಂದ ನೀನು ನನ್ನನ್ನೇ ಕರೆಯುತ್ತಿರುವೆ ಎನಿಸಿತು. ನನ್ನ ಜೊತೆಗೆ ಬಾ, ಮನೆಗೆ ಹೋಗೋಣ'.

ತನ್ನ ಕೊಳಲನ್ನು ಸಿಕ್ಕಿಸಿಕೊಂಡು, ಆ ಹುಡುಗ ಅವಳನ್ನು ಹಿಂಬಾಲಿಸಿದನು.

ತನ್ನ ಐದನೇ ವಯಸ್ಸಿನಲ್ಲಿ ಸುಕುಮಾರ್ ತನ್ನ ಸ್ವಂತ ತಾಯಿಯನ್ನು ಕಳೆದುಕೊಂಡನು. ಅವಳ ಬಗ್ಗೆ ಅವನಿಗೆ ಜ್ಞಾಪಕವಿರುವುದು ಎಂದರೆ, ಅವಳ ಹೊಳೆಯುವ ಕಣ್ಣುಗಳು ಮತ್ತು ಅವಳ ಕುತ್ತಿಗೆಯಲ್ಲಿ ಯಾವಾಗಲೂ ಹಾಕಿಕೊಳ್ಳುತ್ತಿದ್ದ ನೀಲಿ ಮಣಿಗಳ ಹಾರ. ಅವಳು ಇನ್ನೂ ತನ್ನ ಹೃದಯದಲ್ಲಿ ವಾಸಿಸುತ್ತಿದ್ದಾಳೆಂದು ಯಾವಾಗಲೂ ನಂಬಿದ್ದ.

ಆ ಕೊಳಲು ಅವನ ತಂದೆ ಕೊಟ್ಟಿದ್ದ ಕಾಣಿಕೆ. ತನ್ನ ತಾಯಿ ಸತ್ತಮೇಲೆ, ಅವನ ತಂದೆ ಪ್ರತಿಸಲ ಮಲಗುವ ಮೊದಲು ತನ್ನ ಕೊಳಲನ್ನು ನುಡಿಸುತ್ತಿದ್ದನು. ಆ ಧ್ವನಿಯ ಮಾಧುರ್ಯಕ್ಕೆ ಆ ಚಿಕ್ಕ ಹುಡುಗ ನಿದ್ರೆ ಹೋಗುತ್ತಿದ್ದನು. ಒಂದು



ರಾತ್ರಿ ಅವನ ತಂದೆ ಕೊಳಲು ನುಡಿಸುತ್ತಾ ಇದ್ದಾಗ ಸುಕುಮಾರ್ ಕೇಳಿದನು, 'ಅಮ್ಮ ಎಲ್ಲಿ? ಇನ್ನು ಅವಳನ್ನೇಕೆ ನೋಡಲಾಗುವುದಿಲ್ಲ?'

ಕೊಳಲನ್ನು ಕೆಳಗೆ ಇಟ್ಟ ತಂದೆಯ ಕಣ್ಣುಗಳು ತೇವಗೊಂಡುವು. 'ನಿಮ್ಮ ತಾಯಿ ಈಗ ದೇವಲೋಕದಲ್ಲಿ ವಾಸಮಾಡುತ್ತಾಳೆ. ಅವಳು ಆಕಾಶದಿಂದ ಆಚೆ ಇದ್ದಾಗ್ಯೂ ನಮ್ಮ ಹೃದಯಗಳಲ್ಲಿ ಇದ್ದಾಳೆ'

ಸುಕುಮಾರ್ ಕೇಳಿದನು, 'ನೀನು ಯಾವಾಗಲಾದರೂ ಅವಳನ್ನು ನಿನ್ನ ಹೃದಯದಲ್ಲಿ ಭೇಟಿಮಾಡಿದ್ದೀಯಾ?'

ಆ ಹುಡುಗನ ಕಡೆ ದೃಷ್ಟಿಸಿ ನೋಡುತ್ತಾ, ಅವನು ಉತ್ತರ ಕೊಟ್ಟನು; 'ಹೌದು ಮಗಾ, ನಾನು ಕೊಳಲು ನುಡಿಸಿದಾಗಲೆಲ್ಲಾ ಅವಳನ್ನು ಭೇಟಿಮಾಡುವೆ'.

'ಓ ನನಗೂ ಅವಳನ್ನು ನೋಡಲು ಇಷ್ಟ, ದಯವಿಟ್ಟು ನನಗೂ ಒಂದು ಕೊಳಲನ್ನು ಮಾಡಿಕೊಡು, ಅದನ್ನು ನುಡಿಸಿದಾಗ ಅವಳು ನನ್ನ ಹೃದಯದಲ್ಲಿರುವಳು ಎಂದು ತಿಳಿದುಕೊಳ್ಳುವೆನು'.

ಕೂಡಲೇ ಸುಕುಮಾರನ ತಂದೆ ಶ್ರದ್ಧೆಯಿಂದ ಆ ಹುಡುಗನಿಗೆ ಒಂದು ಕೊಳಲನ್ನು ತಯಾರಿಸಿಕೊಟ್ಟು ಅದನ್ನು ನುಡಿಸುವ ರೀತಿಯನ್ನು ಹೇಳಿಕೊಟ್ಟನು. ಅವನ ತಂದೆ ಬೆಳದಿಂಗಳ ಸೊಗಸನ್ನು, ಮಳೆ ಬೀಳುವಾಗ ಬರುವ ಸಂಗೀತವನ್ನು,

ಪ್ರಕೃತಿಯ ಗೀತೆಯನ್ನು ತಿಳಿಸಿದ. ಆಗಾಗ್ಗ ತಂದೆ ಹೇಳುತ್ತಿದ್ದರು; 'ಸಂತೋಷವಾಗಿರು ಮತ್ತು ಸಂತೋಷದಿಂದ ಕೊಳಲನ್ನು ನುಡಿಸು, ನಿನ್ನ ಸ್ವರಗಳನ್ನು ನಿನ್ನ ತಾಯಿ ಕೇಳಿದಾಗ, ಅವಳಿಗೆ ಸಂತೋಷವಾಗುವುದು.'

ಸುಕುಮಾರ್ ತನ್ನ ಕಾಲವನ್ನೆಲ್ಲಾ ಕೊಳಲನ್ನು ಅಭ್ಯಾಸಮಾಡುವುದರಲ್ಲೇ ಕಳೆದನು. ಅವನಿಗೆ ಒಂಬತ್ತು ವರ್ಷ ಆದಾಗ ಒಂದು ದಿನ ಅವನ ತಂದೆ, 'ಮಗೂ, ಈಗ ನೀನು ನಿನ್ನ ತಂದೆ ಕೊಳಲು ನುಡಿಸುವುದಕ್ಕಿಂತ ಉತ್ತಮವಾಗಿ ನುಡಿಸುವೆ; ಆದರೆ, ನಿನಗೆ ಈ ಮುಂಚೆ ಎಂದೂ ಹೇಳದೇ ಇದ್ದ ವಿಷಯವನ್ನು ಹೇಳುವೆ. ವ್ಯಕ್ತಿ ಎಂಥವನೇ ಆಗಲಿ, ಕೊಳಲಿನ ಮಾಧುರ್ಯವನ್ನು ತನ್ನ ಹೃದಯದಲ್ಲಿ ಅನುಭವಿಸಬಲ್ಲನು. ನೀನು ನುಡಿಸುವಾಗ ಹೃದಯತುಂಬಿ ನುಡಿಸು, ಆಗ ಮಾಧುರ್ಯದಿಂದ ಪ್ರತಿಯೊಬ್ಬರೂ ನಿನ್ನ ಪ್ರೀತಿಯನ್ನು ಗುರುತಿಸುವರು. ನೀನು ನಿನ್ನ ನಿಜವಾದ ಸ್ವಂತ ತಾಯಿಯನ್ನು ನೋಡಲು ಶಕ್ತನಾಗುವೆ'.



ಇದಾದ ಕೆಲವು ದಿನಗಳ ನಂತರ ಸುಕುಮಾರನ ತಂದೆ ಸತ್ತು ಹೋದರು. ದುಃಖ ಹಾಗೂ ಒಂಟಿತನದಿಂದ ಆ ಹುಡುಗ ಕೊಳಲೂದುವುದನ್ನು ಬಿಟ್ಟುಬಿಟ್ಟನು. ಅದನ್ನು ಆರು ತಿಂಗಳುಗಳ ಕಾಲ ಮುಟ್ಟಲಿಲ್ಲ. ಅವನು ಅನಾಥನಾಗಿದ್ದರಿಂದ ಒಳಗೊಳಗೇ ಅಳುತ್ತಾ ಕಾಲ ಕಳೆದನು. ಕೊನೆಗೆ ತನ್ನ ಚಿಕ್ಕಪ್ಪನೊಡನೆ ವಾಸ ಮಾಡಬೇಕಾಯಿತು. ಅಲ್ಲಿ, ಪುನಃ ಅವನು ಕೊಳಲನ್ನು ನುಡಿಸಲು ಪ್ರಾರಂಭಿಸಿದನು. ತನ್ನ ಸುತ್ತಲಿನವರ ಗಮನ ಸೆಳೆಯುವುದಕ್ಕಲ್ಲ, ಅವರಿಗೆ ತನ್ನ ಪ್ರೀತಿಯನ್ನು ತೋರಿಸುವುದಕ್ಕೆ ಮತ್ತು ಅವರಿಂದ ಪ್ರೀತಿಯನ್ನು ಪಡೆಯುವುದಕ್ಕೆ.

ಸುಕುಮಾರ್ ವ್ಯಾಕುಲನಾಗಿದ್ದ. ಒಂದು ದಿನ ಅವನು ತನ್ನ ಕೊಳಲನ್ನು ತೆಗೆದುಕೊಂಡು ತನ್ನ ಚಿಕ್ಕಪ್ಪನ ಮನೆಯನ್ನು ಬಿಟ್ಟು, ಯಾವ ಗೊತ್ತು ಗುರಿಯೂ ಇಲ್ಲದೆ ಪ್ರಯಾಣ ಮಾಡಿದನು. ದಾರಿಯುದ್ದಕ್ಕೂ ಕೊಳಲನ್ನು ನುಡಿಸುವನು, ರಸ್ತೆಯಲ್ಲಿ ಸಂಧಿಸಿದ ಜನಗಳು ಅವನ ರಾಗಗಳನ್ನು ಸಂತೋಷದಿಂದ ಅನುಭವಿಸುತ್ತಾ, ಕೆಲವು ವೇಳೆ ಅವನ ಸಂಗೀತಕ್ಕೆ ನೃತ್ಯ ಮಾಡುತ್ತಾ ಅವನನ್ನು ಸುತ್ತುಗಟ್ಟುತ್ತಿದ್ದರು. ಆದರೂ ಅವನು ಏಕಾಂಗಿ, ಏಕೆಂದರೆ ಅವನ ತಂದೆ ತಾಯಿಗಳಷ್ಟು ಪ್ರೀತಿಸುವವರು ಯಾರೂ ಇರಲಿಲ್ಲ. ಬಹುತೇಕ ಜನಗಳು ಹೆಚ್ಚಾಗಿ ತಮ್ಮಲ್ಲಿ ಮತ್ತು ತಮ್ಮ ಸಮಸ್ಯೆಗಳಲ್ಲಿ ಮುಳುಗಿರುತ್ತಿದ್ದರು. ಅವನು ತನ್ನ ರಾಗಗಳನ್ನು ಮುಗಿಸಿದ ಮೇಲೆ ಅವನ ಬಗ್ಗೆ ವಿಚಾರಿಸಲು ಅವರಿಗೆ ಸಮಯವೇ ಇರುತ್ತಿರಲಿಲ್ಲ. ಅವನು ಆ ಸಂಜೆ ತನ್ನನ್ನು ಮಗೂ ಎಂದು ಕರೆದ ಹಳ್ಳಿಯ ಮುಖ್ಯಸ್ಥನ ಹೆಂಡತಿಯನ್ನು ಭೇಟಿಯಾಗುವವರೆಗೆ, ಯಾರಿಗೂ ಅವನಿಗಾಗಿ ಸಮಯವಿರಲಿಲ್ಲ. ಅವಳಲ್ಲಿ ಅವನು ಮತ್ತೊಮ್ಮೆ ತನ್ನ ಸ್ವಂತ ತಾಯಿಯನ್ನು ಕಂಡಂತೆ ಭಾವಿಸಿದನು.

ಅವರಿಬ್ಬರೂ ಅಂಗಳಕ್ಕೆ ಪ್ರವೇಶಿಸುತ್ತಲೇ ಹಿತ್ತಲಿನಲ್ಲಿ ಒಬ್ಬ ಚಿಕ್ಕ ಹುಡುಗಿ ತಿರುಗಾಡುತ್ತಾ ಇರುವುದನ್ನು ನೋಡಿದನು.'ಸಾಯಪತ್ರಿ'. ಹೆಂಗಸು ಸುಕುಮಾರನ ಕಡೆ ತೋರಿಸುತ್ತಾ ಹೇಳಿದಳು; 'ಮಗಳೇ, ನಾನು ಒಬ್ಬ ಒಳ್ಳೆಯ ಹುಡುಗನನ್ನು ನಮ್ಮ ಬಳಿ ಇಟ್ಟುಕೊಳ್ಳಲು ಕರೆತಂದಿದ್ದೇನೆ– ಅಲ್ಲ, ನಾನು ನಿನಗೊಬ್ಬ ಅಣ್ಣನನ್ನು ತಂದಿದ್ದೇನೆ'.

ಆ ಇಬ್ಬರೂ ನಾಚಿಕೆಯಿಂದ ಏನೂ ಮಾತನಾಡದೆ ನಿಂತಿದ್ದರು. ಆದರೆ ಇಬ್ಬರೂ ಸಂತೋಷವಾಗಿದ್ದರು. ಸಹೋದರರಿಲ್ಲದ ಸಾಯಪತ್ರಿ ಈಗ ಸುಕುಮಾರನನ್ನು ಪಡೆದಿದ್ದಳು, ಅವನಿಗೆ ಈಗ ಒಬ್ಬ ತಂಗಿ ಸಿಕ್ಕಿದ್ದಳು. ಅವರು ಮನೆಯನ್ನು ಪ್ರವೇಶಿಸಿದರು, ತಾಯಿ ಬೆಚ್ಚನೆಯ ಲ್ಯಾಂಪ್ ಬೆಳಕಿನಲ್ಲಿ ಸಂಜೆಯ ಊಟವನ್ನು ತಯಾರಿಸುತ್ತಿರುವುದನ್ನು ನೋಡುತ್ತಾ ಸುಕುಮಾರ್ ಕುಳಿತನು. ತನ್ನ ಜೀವನದಲ್ಲಿ ಬಹಳ ಕಾಲದಿಂದ ಕಳೆದುಕೊಂಡ ಸಂತೋಷವನ್ನು ಅವನು ಅನುಭವಿಸಿದನು.

ಆ ಹೊತ್ತಿಗೆ ಆ ಹಳ್ಳಿಯ ಮುಖ್ಯಸ್ಥ ಮನೆಗೆ ಬಂದನು. ಏನನ್ನೂ ಹೇಳದೆ, ಅವನು ಆ ಹುಡುಗನಿಗೆ ದುಃಖ ಹಾಗೂ ಅಹಿತವಾಗುವಂತೆ ಅವನ ಕಡೆ

ಒಂದು ಕುತೂಹಲದ ನೋಟವನ್ನು ಬೀರಿದನು. ಆ ಹೆಂಗಸು ತನ್ನ ಗಂಡನಿಗೆ ಹೇಳಿದಳು; 'ಇವತ್ತು ರಸ್ತೆಯಲ್ಲಿ ಈ ಹುಡುಗನನ್ನು ಭೇಟಿ ಮಾಡಿದೆ, ಇವನು ಕೊಳಲನ್ನು ಚೆನ್ನಾಗಿ ನುಡಿಸುತ್ತಾನೆ'.

ರಾತ್ರಿ ಊಟ ಮಾಡುವಾಗ ಆ ಮನುಷ್ಯ ಹುಡುಗನಿಗೆ ಏನೂ ಹೇಳಲಿಲ್ಲ. ಊಟದ ತಟ್ಟೆಗಳನ್ನು ಸ್ವಚ್ಛ ಮಾಡಿದ ಮೇಲೆ, ಸುಕುಮಾರನು ತನ್ನ ಕೊಳಲನ್ನು ಹೊರಗೆ ತೆಗೆದು ಮೆಲ್ಲಗೆ ನುಡಿಸಲು ಪ್ರಾರಂಭಿಸಿದನು. ಕುಟುಂಬದವರು ಅಲ್ಲಿ ಮೌನವಾಗಿ ಹುಡುಗನ ಸಂಗೀತದಲ್ಲಿ ತಲ್ಲೀನವಾಗಿ ಕುಳಿತಿದ್ದರು. ತಮ್ಮ ಹೃದಯಗಳಿಗೆ ತುಂಬಾ ಪರಿಚಿತವಾದ ಏನೋ ಒಂದು ಹೃದಯಸ್ಪರ್ಶಿಯಾದ ಮಾಧುರ್ಯವನ್ನು ಅವರು ಅನುಭವಿಸಿದರು. ತನ್ನ ರಾಗಗಳ ಮೂಲಕ ತನ್ನ ಹೊಸ ಅಣ್ಣ ಕುಟುಂಬದೊಡನೆ ಮಾತನಾಡಲು ಪ್ರಯತ್ನಿಸುತಿದ್ದಾನೆಂದು ಸಾಯಪತ್ರಿ ಭಾವಿಸಿದಳು. ಅವನು ಕೊಳಲು ನುಡಿಸುವುದನ್ನು ಬಿಟ್ಟು ಮಲಗಲು ಎದ್ದಾಗ, ಆ ಹೆಂಗಸು ಮೃದುವಾಗಿ ಅವನ ಮುಖವನ್ನು ಸವರಿ ಅವನ ಕೆನ್ನೆಗಳನ್ನು ಮುದ್ದಿಸುತ್ತಾ 'ಮಗೂ, ನಿನಗೆ ಶುಭ ರಾತ್ರಿಯಾಗಲಿ' ಎಂದಳು.

ಮಾರನೆಯ ದಿನ ಬೆಳಗ್ಗೆ ಸುಕುಮಾರನು ಬೇಗ ಎದ್ದು ಹೊರಡಲು ತಯಾರಾದನು. ಆ ಹೆಂಗಸು ಅವನನ್ನು ತಡೆಯುತ್ತಾ; 'ನಾನು ತಾಯಿ, ನೀನು ನನ್ನ ಮಗ. ನಾನು ನಿನ್ನನ್ನು ಮನೆ ಬಿಟ್ಟು ಹೋಗಲು ಬಿಡುವುದಿಲ್ಲ' ಎಂದಳು. ಹೀಗೆ, ಸುಕುಮಾರ ಆ ಕುಟುಂಬದಲ್ಲೇ ಉಳಿದುಕೊಂಡನು.

ಸಾಯಪತ್ರಿ ಸುಕುಮಾರನನ್ನು ತುಂಬಾ ಪ್ರೀತಿಸುತ್ತಿದ್ದಳು, ಆದರೆ ಅವಳಿಗೆ ಅರ್ಥವಾಗದಂತಹ ಅನೇಕ ವಿಷಯಗಳು ಅವನಲ್ಲಿದ್ದುವೆಂದು ಅವಳು ಕಂಡುಕೊಂಡಳು. ಅವನು ಆಗಾಗ್ಗೆ ಏಕೆ ಗಂಭೀರವಾಗಿರುತ್ತಾನೆ ಎಂಬುದರ ಬಗ್ಗೆ ಅವಳು ತುಂಬಾ ಆಶ್ಚರ್ಯಗೊಂಡಿದ್ದಳು. ಹಗಲು ಹೊತ್ತಿನಲ್ಲಿ ಅವಳು ತನ್ನ ಇತರ ಸ್ನೇಹಿತರೊಡನೆ ಇವನ ಪರಿಚಯ ಮಾಡಿಸಲು ಹಳ್ಳಿಯ ಸುತ್ತ ಕರೆದುಕೊಂಡು ಹೋಗುತ್ತಿದ್ದಳು.

ಒಂದು ದಿನ ಇಬ್ಬರೂ ಹತ್ತಿರದಲ್ಲಿನ ಒಂದು ಕೊಳದ ಹತ್ತಿರಕ್ಕೆ ನಡೆದು ಹೋದರು. ಸುಕುಮಾರನು ಒಂದು ಬಂಡೆಯ ಮೇಲೆ, ನೀರಿನ ಕಡೆ ದೃಷ್ಟಿಸಿ ನೋಡುತ್ತಾ ಮೌನವಾಗಿ ಕುಳಿತನು. ತನ್ನ ಕುತೂಹಲವನ್ನು ತಡೆದುಕೊಳ್ಳಲಾರದೆ, ಸಾಯಪತ್ರಿ ಕೇಳಿದಳು; ಅಣ್ಣಾ, ನೀನೇನು ಯೋಚಿಸುತ್ತಿದ್ದೀಯಾ?

'ಪುಟಾಣಿ, ನಿನಗೆ ನಿನ್ನ ಸ್ವಂತ ತಾಯಿ ಇದ್ದಾಳೆ, ಮತ್ತೆ ಅವಳು ನಿನ್ನನ್ನು ಪ್ರೀತಿಸುತ್ತಾಳೆ, ಏಕೆಂದರೆ ನೀನು ಅವಳ ಮಗಳು ಆದರೆ, ನನ್ನ ತಾಯಿ ಹೊರಟುಹೋಗಿದ್ದಾಳೆ. ಅವಳನ್ನು ಕಾಣುವ ಒಂದೇ ಒಂದು ಮಾರ್ಗ ಎಂದರೆ, ಈ ಕೊಳಲನ್ನು ನುಡಿಸುವುದು'.

ಅವನ ಉತ್ತರದಿಂದ ಸಾಯಪತ್ರಿ ಗಾಬರಿಗೊಂಡಳು.'ಆದರೆ, ಅಣ್ಣಾ, ನನ್ನ

ತಾಯಿ ನಿನ್ನ ತಾಯಿಯೂ ಅಲ್ಲವೇ? ನಾನು ನಿನ್ನ ತಂಗಿಯಲ್ಲವೇ?' ಎಂದು ಕೇಳಿದಳು.

ಅನುಮಾನಿಸುತ್ತಾ, ಅವನು ಉತ್ತರಕೊಟ್ಟನು; 'ಹೌದು, ನೀನು ನನ್ನ ತಂಗಿ, ಅವಳು ನನ್ನ ತಾಯಿ. ಆದರೆ........'

'ಆದರೆ, ಏನಣ್ಣಾ?'

'ನಿನಗೆ ನಿನ್ನ ತಂದೆಯ ಪ್ರೀತಿ ಇದೆ, ಆದರೆ, ನಾನು ಅದನ್ನು ಕಳೆದುಕೊಂಡಿದ್ದೇನೆ'.

'ಆದರೆ ನನ್ನ ತಂದೆ ನಿನ್ನ ತಂದೆ ಕೂಡ ಅಲ್ಲವೆ?'.

'ಇಲ್ಲ, ಏಕೆಂದರೆ ನಾನು ಇನ್ನೂ ಅವರ ಹೃದಯವನ್ನು ಗೆದ್ದಿಲ್ಲ'.

'ಒಳ್ಳೆಯದು, ಹಾಗಾದರೆ, ನಾನು ಅವರಿಗೆ ಈ ರಾತ್ರಿ ನಿನ್ನನ್ನು ಹೆಚ್ಚಾಗಿ ಪ್ರೀತಿಸಬೇಕೆಂದು ಹೇಳುವೆನು'.

'ಬೇಡ, ಬೇಡ, ತಂಗಿ, ಹಾಗೆ ಮಾಡಬೇಡ. ನನ್ನ ಕೊಳಲನ್ನು ನುಡಿಸುವುದರಿಂದ ಅವರ ಹೃದಯವನ್ನು ಗೆಲ್ಲುವೆನು'.

ಆ ಸಂಜೆ ಆ ಇಬ್ಬರು ಹುಡುಗರೂ ನಿದ್ರೆ ಹೋದ ಮೇಲೆ, ತನ್ನ ಹೆಂಡತಿಯೊಡನೆ ಮೆಲ್ಲಗೆ ಮಾತನಾಡಲು ಪ್ರಾರಂಭಿಸಿದನು. 'ಅನಾಥರು ತುಂಬಾ ಅವಲಂಬಿಗಳಾಗಿರುವುದಿಲ್ಲ. ಅವರು ಒಂದು ಜಾಗದಲ್ಲಿ ಹೆಚ್ಚು ಕಾಲ ನಿಲ್ಲುವುದಿಲ್ಲ. ಸುಕುಮಾರ್ ಕೂಡಾ ಹಾಗೇ. ಒಂದು ದಿನ ಅವನು ಮನೆ ಬಿಟ್ಟು ಹೊರಟು ಹೋಗುವನು. ಈ ಮಧ್ಯೆ ಇವನು ಬಹುಶಃ ನಮ್ಮ ಕರುಣೆಯಿಂದ ಕಾಲಹರಣ ಮಾಡುತ್ತಾ, ನಮ್ಮ ಸಾಯಪತ್ರಿಯ ಮೇಲೆ ಒಂದು ಕೆಟ್ಟ ಪರಿಣಾಮ ಬೀರಿ ದೂರವಾಗುವನು.'

ಆ ಹೆಂಗಸು ತನ್ನ ಗಂಡನ ಮಾತುಗಳಿಂದ ಗಾಬರಿಗೊಂಡಳು.

'ಆದರೆ, ಖಂಡಿತ ಅವನೊಬ್ಬ ಅನಾಥ. ಅದಕ್ಕಾಗಿಯೇ ನಾವು ಅವನ ತಂದೆ ತಾಯಿಯರಾಗಬೇಕು. ಕೆಲವು ವೇಳೆ ನೀವು ಹೇಳುವ ಹೃದಯಹೀನ ಮಾತುಗಳನ್ನು ನಾನು ನಂಬಲಾರೆ......'

ಅಲ್ಲಿಗೆ ಅವರ ಸಂಭಾಷಣೆ ಮುಗಿದು ಅವರಿಬ್ಬರೂ ನಿದ್ರೆ ಹೋದರು.

ಮನೆಯಲ್ಲಿ ಜೀವನ ಎಂದಿನಂತೆ ಮುಂದುವರಿಯುತ್ತಿತ್ತು. ಹಳ್ಳಿಯಲ್ಲಿ ಸುಗ್ಗಿಕಾಲ ಬಂತು. ರೊಡೋಡೆನ್‌ಡ್ರಾನ್( (Rhododenron)ಮರಗಳು ಅರಳಿದವು. ಅವರ ಪದ್ಧತಿಯಂತೆ ಹಳ್ಳಿಯ ಯುವತಿಯರು ಘಾಟು (Ghatu) ನೃತ್ಯವನ್ನು ಮಾಡಲು ಒಟ್ಟು ಸೇರಿದರು.

ಒಂದು ಸುಗ್ಗಿಯ ಸಂಜೆ ಸುಕುಮಾರ ಕಿಟಕಿಯ ಬಳಿ ಕುಳಿತುಕೊಂಡು, ಪೂರ್ಣ ಚಂದ್ರನನ್ನು ದೃಷ್ಟಿಸಿ ನೋಡುತ್ತಿದ್ದನು. ತೇಲುವ ಬೆಳ್ಳಿಯ ಬೆಳದಿಂಗಳು ಅವನನ್ನು ವಿಶೇಷವಾದ ಸ್ವರಗಳನ್ನು ನುಡಿಸುವಂತೆ ಕೇಳುತ್ತಿರುವಂತೆ ಅವನಿಗೆ ಅನ್ನಿಸಿತು. ಅವನು ಕೊಳಲನ್ನು ಎತ್ತಿಕೊಂಡು ಒಂದು ಮಧುರ ಸ್ವರವನ್ನು

ಸೃಷ್ಟಿಸತೊಡಗಿದ. ಅದನ್ನು ಮುಗಿಸಿದ ಮೇಲೆ ಅವನಿಗೆ ದುಃಖವಾಯಿತು. ಅವನು ಎಷ್ಟು ಪ್ರಯತ್ನಿಸಿದ್ದಾಗ್ಯೂ ಸಾಯಪತ್ರಿಯ ತಂದೆಯ ಪ್ರೀತಿಯನ್ನು ಸಂಪಾದಿಸಲು ಅವನಿಗೆ ಸಾಧ್ಯವಾಗಿರಲಿಲ್ಲ. ಅದೊಂದು ಅಸಾಧ್ಯ ಕೆಲಸವಾಗಿತ್ತು. ಅವನು ಯೋಚಿಸಿದ, ಇಲ್ಲಿರುವುದನ್ನು ಮುಂದುವರಿಸುವುದಕ್ಕಿಂತ ಈ ಜಾಗವನ್ನು ಬಿಡುವುದು ಉತ್ತಮ ಎಂದುಕೊಂಡ.

ಮಾರನೇ ದಿನ ಮುಂಜಾನೆಯ ಸಮಯದಲ್ಲಿ, ಮನೆಯಲ್ಲಿ ಉಳಿದವರೆಲ್ಲಾ ನಿದ್ರೆ ಮಾಡುತ್ತಿದ್ದಾಗ, ನಿಶ್ಶಬ್ದವಾಗಿ ಅವನು ಮನೆಯನ್ನು ಬಿಟ್ಟನು. ಹೊರಗಡೆ ನಿಂತು ಸಾಯಪತ್ರಿ ಹಾಗೂ ಅವಳ ತಾಯಿಯನ್ನು ಮೌನವಾಗಿ ಮನಸ್ಸಿನಲ್ಲೇ ಬೀಳ್ಕೊಟ್ಟು ತನ್ನ ರಸ್ತೆಯನ್ನು ತಾನು ಹಿಡಿದನು.

ಬೆಳಗಿನಜಾವದ ಹೊತ್ತಿಗೆ ಅವನು ಹಳ್ಳಿಯಿಂದ ಆಚೆಗೆ ಪೈನ್ ಮರಗಳಿಂದ ತುಂಬಿದ ಬೆಟ್ಟಗಳನ್ನು ತಲಪಿದನು. ಕ್ಷಣಕಾಲ ಸಾಯಪತ್ರಿ ತನ್ನ ಹೆಸರನ್ನು ಕರೆಯುತ್ತಿರುವಂತೆ ಕಲ್ಪಿಸಿಕೊಂಡನು. ತಾನು ಅವಳಿಗೆ ಕೊನೆಯ ನಮಸ್ಕಾರಗಳನ್ನು ಹೇಳಲು ಕಾದಿದ್ದರೆ ಚೆನ್ನಾಗಿತ್ತೆಂದು ಅಂದುಕೊಂಡನು. ಆದರೆ, ಹಿಂದಕ್ಕೆ ಹೋಗುವಂತಿಲ್ಲ, ಆದುದರಿಂದ ಪುನಃ ತನ್ನ ದಾರಿಯನ್ನು ಹಿಡಿದನು. ದಿನವೆಲ್ಲಾ ಬೆಟ್ಟಗಳನ್ನು ಹತ್ತಿ ಕಣಿವೆಗಳ ಮುಖಾಂತರ ಸೂರ್ಯ ಮುಳುಗುವ ಹೊತ್ತಿಗೆ ಪರ್ವತಗಳ ತುದಿಯನ್ನು ತಾನು ಮುಟ್ಟುವವರೆಗೆ ನಡೆದನು. ಅಲ್ಲಿ ಒಂದು ದೇವತೆಯ ವಿಗ್ರಹ ಇರುವ ದೇವಾಲಯ ಇತ್ತು. ಆ ರಾತ್ರಿ ಅಲ್ಲಿ ತಾನು ಆಶ್ರಯ ಪಡೆಯುವಂತೆ ನಿಶ್ಚಯಿಸಿದನು. ಒಮ್ಮೆ ತಾನು ತುಂಬಾ ಏಕಾಂಗಿ ಹಾಗೂ ದುಃಖಿ ಎಂದು ಭಾವಿಸಿದನು. ಅವನ ತಲೆಯಲ್ಲಿ ಒಂದು ರಾಗ ಸುಳಿಯುತ್ತಿತ್ತು. ಆದರೆ ಅದು ತುಂಬಾ ದುಃಖಕರವಾಗಿತ್ತು. ತಾನು ಸಾಯಪತ್ರಿ ಮತ್ತು ಅವಳ ತಾಯಿಯನ್ನು ಬಿಟ್ಟು ಬಂದು ಮತ್ತೊಮ್ಮೆ ತನ್ನ ಮನೆಯನ್ನು ಕಳೆದುಕೊಂಡೆನೆಂದು ಅವನಿಗೆ ಅನ್ನಿಸಿತು. ಅವಳನ್ನು ತಾನು ಎಷ್ಟು ಪ್ರೀತಿಸುತ್ತೇನೆ ಎಂಬುದಾಗಿ ಸಾಯಪತ್ರಿಗೆ ತಿಳಿಸಲು ಒಂದು ಮಧುರ ಸ್ವರವನ್ನು ನುಡಿಸಲು ಅವನು ಪ್ರಯತ್ನಿಸಿದನು, ಆದರೆ ಅವನ ಹೃದಯದಿಂದ ಬಂದಿದ್ದೆಲ್ಲಾ ನಿರಾಶೆಯ ಕೂಗಾಗಿತ್ತು. ಅವನು ಅಲ್ಲಿ ಅಳುತ್ತಾ ಕುಳಿತನು.

ಅವನು ಎದ್ದಾಗ, ಬೆಳಗಿನ ಸೂರ್ಯನ ಬೆಳಕು ದೇವಾಲಯದ ಕಿಟಕಿಯ ಬಿರುಕುಗಳಿಂದ ತೂರಿ ಬರುತ್ತಿತ್ತು. ಮೇಲ್ಗಡೆ ನೋಡಿದಾಗ, ಒಂದು ದೇವತೆಯ ವಿಗ್ರಹ ಸ್ವಾಗತಿಸುವಂತೆ ಕೈಗಳನ್ನು ತನ್ನ ಕಡೆ ಚಾಚಿತ್ತು. ಆ ದೇವತೆಯ ತಲೆಯು ಪ್ರಭಾವಳಿಯಿಂದ ಸುತ್ತುವರಿಯಲ್ಪಟ್ಟಿತ್ತು. ಅದರ ಕುತ್ತಿಗೆಯಲ್ಲಿ ಒಂದು ಹೂವಿನ ಹಾರ ತೂಗಾಡುತ್ತಿತ್ತು. ಆ ವಿಗ್ರಹದಲ್ಲಿ ಅವನು ಸಾಯಪತ್ರಿ ಮತ್ತು ಅವಳ ತಾಯಿಯ ಇರುವಿಕೆಯನ್ನು ಕಲ್ಪಿಸಿಕೊಂಡನು. ಆ ವಿಗ್ರಹದ ಕೈಗಳಿಂದ ಅವರು ತನ್ನನ್ನು ಆಲಂಗಿಸಲು ಪ್ರಯತ್ನಿಸುತ್ತಿರುವರೋ ಎಂಬಂತೆ ಕಾಣಿಸುತ್ತಿತ್ತು. ಕೂಡಲೇ



ಅನುಮಾನಗಳು ಅವನನ್ನು ಮುತ್ತಿದವು. ತಾನು ಪ್ರಯಾಣವನ್ನು ಮುಂದುವರಿಸಬೇಕೇ ಅಥವಾ ಸಾಯಪತ್ರಿಯ ಮನೆಗೆ ಹಿಂತಿರುಗಿ ಹೋಗಬೇಕೇ? ಎಂದು ಯೋಚಿಸತೊಡಗಿದ. ಅವನು ನಿಧಾನವಾಗಿ ದೇವಾಲಯದಿಂದ ಹೊರಟು ಬಂದನು. ಒಂದು ದೊಡ್ಡ ಮರದ ಕೆಳಗೆ ಕುಳಿತುಕೊಂಡನು. ದಿನವೆಲ್ಲಾ ಮುಂದೇನು ಮಾಡುವುದೆಂಬುದನ್ನು ನಿಶ್ಚಯಿಸಲು ಪ್ರಯತ್ನಿಸುತ್ತಾ ಕುಳಿತನು.

ಆ ರಾತ್ರಿ ಅದೇ ದೇವಾಲಯದಲ್ಲಿ ಸಾಯಪತ್ರಿ ಬಗ್ಗೆ ಕನಸು ಕಾಣುತ್ತಾ ಮಲಗಿದನು. ಕನಸಿನಲ್ಲಿ ಅವಳು ತನ್ನನ್ನು ಹಿಂಬಾಲಿಸುವಂತೆ ಸನ್ನೆ ಮಾಡುತ್ತಾ ಅವನ ಮುಂದೆ ನಿಂತಿದ್ದಳು. ಅವನು ಮಾತನಾಡಲು ಪ್ರಾರಂಭಿಸಿದನು. ಆದರೆ, ಅವಳು ತನ್ನ ಬೆರಳನ್ನು ಅವನ ತುಟಿಗಳ ಮೇಲೆ ಇಟ್ಟುಕೊಂಡು ಸುಮ್ಮನೆ ಇರುವಂತೆ ಸೂಚಿಸುತ್ತಿದ್ದಳು. ಅವನು ತನ್ನ ನಿದ್ರೆಯಿಂದ ಎದ್ದ ಮೇಲೆ, ತನ್ನ ನಿರ್ಧಾರದ ಅರಿವಾಯಿತು. ಮನೆಗೆ ಹಿಂದಿರುಗಲು ನಿಶ್ಚಯಿಸಿದ.

ಅವನು ಆ ಹಳ್ಳಿಗೆ ಮೊದಲು ಬಂದಿದ್ದು ಮತ್ತು ಆ ಹಳ್ಳಿಯ ಮುಖ್ಯಸ್ಥನ ಹೆಂಡತಿ ಜೊತೆ ಮನೆಗೆ ಹೋಗಿದ್ದು ಇದೆಲ್ಲಾ ಕಳೆದು ಒಂದು ವರ್ಷವಾಗಿತ್ತು. ಸಾಯಪತ್ರಿ ತುಳಸಿ ಗಿಡದ ಜಗಲಿಯ ಮುಂದೆ ನಿಂತಾಗ, ಅವನು ಅವಳ ಮೊಟ್ಟಮೊದಲ ಸಲದ ದರ್ಶನ ಮಾಡಿದ್ದನು. ಅದೇ ಸಮಯದಲ್ಲಿ ಜಗಲಿಯ ಮೇಲೆ ಒಂದು ದೀಪ ಉರಿಯುತ್ತಾ ಇತ್ತು. ಆ ರಾತ್ರಿ, ಅವನು ವಾಪಸು

ಬಂದಾಗ, ಅಲ್ಲಿ ಜಗಲಿಯ ಮೇಲೆ ಪುನಃ ಒಂದು ದೀಪ ಉರಿಯುತ್ತಿತ್ತು. ಆದರೆ, ಅಂಗಳದಲ್ಲಿ ಬಹಳ ಜನ ದುಃಖತಪ್ತರಾಗಿ ನಿಂತಿದ್ದರು.

ನಿಶ್ಶಬ್ದವಾಗಿ, ಸುಕುಮಾರನು ಮನೆಗೆ ಪ್ರವೇಶಿಸಿದನು. ಸಾಯಪತ್ರಿ ಅವಳ ತಾಯಿಯ ತೊಡೆಯ ಮೇಲೆ ಮಲಗಿದ್ದಳು.ಅವನನ್ನು ಕಾಣುತ್ತಲೇ ಅವಳು ಕೂಗಿದಳು; 'ಮಗೂ, ನೋಡು ನಿನ್ನ ಪ್ರೀತಿಯ ತಂಗಿಗೆ ಏನಾಗಿದೆ; ಅವಳಿಗೆ ವಾಸಿಯಾಗುವುದೆಂದು ಜನಗಳು ಹೇಳುತ್ತಾರೆ ಆದರೆ, ಏನಾಗುವುದೋ ಕಾಣೆ'.

ಸುಕುಮಾರನು ನಿಧಾನವಾಗಿ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ತಂಗಿಯತ್ತ ಹೋದ. ತನ್ನ ಕೈಯನ್ನು ಚಾಚುತ್ತಾ, ಮೃದುವಾಗಿ ತನ್ನ ತಂಗಿಯ ಕೆನ್ನೆಗಳನ್ನು ತಟ್ಟಿದನು.

'ನೀನು ಹೋದ ರಾತ್ರಿ ಅವಳು ತುಂಬಾ ಜ್ವರದಿಂದ ಮಲಗಿದಳು. ನಿನ್ನೆಯಿಂದ ಅವಳು ಈ ರೀತಿಯಾಗಿದ್ದಾಳೆ–ಪ್ರಜ್ಞೆ ಇಲ್ಲದೆ ಬಿದ್ದಿದ್ದಾಳೆ. ಅವಳ ಜೀವ ನಿನ್ನನ್ನು ಹುಡುಕುತ್ತಿರಬೇಕು ಎನ್ನಿಸುತ್ತದೆ. ಈಗ ನೀನು ವಾಪಸು ಬಂದಿದ್ದೀಯಾ. ಮಗೂ, ದಯವಿಟ್ಟು ಅವಳನ್ನು ವಾಪಸು ಪಡೆಯಲು ಏನನ್ನಾದರೂ ಮಾಡು'.

ಸುಕುಮಾರನು ಅಲ್ಲಾಡದೆ ಸಾಯಪತ್ರಿಯ ಕೆನ್ನೆಯ ಮೇಲೆ ತನ್ನ ಕೈಯನ್ನು ಇಟ್ಟುಕೊಂಡು ಕುಳಿತನು. ಕೊಳಲನ್ನು ಹೊರಗೆ ತೆಗೆದು ತುಂಬಾ ಚೆನ್ನಾಗಿ ನುಡಿಸಲು ಪ್ರಾರಂಭಿಸಿದನು. ಕೊಠಡಿಯಲ್ಲಿ ಆ ಸ್ವರ ಸಂಚರಿಸಿದ ಮೇಲೆ, ಸಾಯಪ್ರತಿಯ ರೆಪ್ಪೆಗಳು ಬಡಿಯಲಾರಂಭಿಸಿದುವು. ಅವಳ ತಂದೆ, ಒಂದು ಲೋಟ ನೀರನ್ನು ತಂದು ಅವಳ ತುಟಿಗಳ ಮೇಲೆ ಇಟ್ಟನು. ನಿಧಾನವಾಗಿ ಅವಳ ಕಣ್ಣುಗಳು ತೆರೆದವು. ಸುಕುಮಾರನನ್ನು ನೋಡಿ ಅವಳು ಉಸುರಿದಳು 'ಓ ನನ್ನ ಅಣ್ಣಾ, ನೀನು ವಾಪಸು ಬಂದಿದ್ದೀಯಾ'!

ಕೊಳಲನ್ನು ಕೆಳಗೆ ಇಟ್ಟು ಸುಕುಮಾರನು ಉತ್ತರ ಕೊಟ್ಟನು; 'ಹೌದು ನನ್ನ ಮುದ್ದು ತಂಗೀ, ನಾನು ಇಲ್ಲೇ ಇದ್ದೇನೆ, ನಾನೇ, ನಿನ್ನ ಅಣ್ಣ'.

ಸುಕುಮಾರನ ಪಕ್ಕಕ್ಕೆ ಹೋಗಿ ಅವಳ ತಂದೆ ಆ ಹುಡುಗನನ್ನು ಆಲಂಗಿಸಿಕೊಂಡು 'ನಿಜವಾಗಿಯೂ ನೀನು ನನ್ನ ಸ್ವಂತ ಮಗ, ಎಂದಿಗೂ ನಿನ್ನನ್ನು ಇಲ್ಲಿಂದ ಹೋಗಲು ಬಿಡುವುದಿಲ್ಲ' ಎಂದು ಹೇಳಿದರು.

ತಾಯಿ ಸಂತೋಷದ ಕಣ್ಣೀರನ್ನು ಸುರಿಸುತ್ತಾ ಕುಳಿತಳು. ಸಾಯಪತ್ರಿ ಮತ್ತು ಸುಕುಮಾರ ಇಬ್ಬರೂ ಒಬ್ಬರನ್ನೊಬ್ಬರು ನೋಡಿ ಮುಗುಳ್ನಕ್ಕರು.

ಇದು, ನಿಜವಾಗಿಯೂ, ಹಳ್ಳಿಯವರು ಹೇಳಿದಂತೆ, ನೇಪಾಳದ ಹೆಸರಾಂತ ಪವಿತ್ರ ನೃತ್ಯಗಳಲ್ಲಿ ಒಂದಾದ Ghatu(ಘಾಟು)ವಿನ ಕಥೆಯಂತಿತ್ತು.

ಚಿತ್ರಗಳು: ಟೇಕ್ ಬೀರ್ ಮುಖಿಯಾ

ಪಾಕಿಸ್ತಾನ

# ಟುನ್ನು ಮತ್ತು ಕತ್ತೆ

## ಅನ್ವರ್ ಇನಾಯತುಲ್ಲಾ

*(ಸಂಪಾದಕರ ಟಿಪ್ಪಣಿ: ಕೊನೆಯ ಉಪ ಕಥೆಯನ್ನು ಬಿಟ್ಟು ಮತ್ತು ಇತರ ಭಾಗಗಳನ್ನು ಸಂಕ್ಷಿಪ್ತ ಮಾಡಿ, ಈ ಕಥೆಯನ್ನು ಸಾಕಷ್ಟು ಚಿಕ್ಕದು ಮಾಡುವುದು ಅಗತ್ಯವಾಗಿದೆ.)*

ಟುನ್ನು ಮತ್ತು ಅವಳ ತಮ್ಮ, ಸಫ್‌ದರ್, ಎಲ್ಲರಿಗಿಂತ ಚಿಕ್ಕ ಚೂಟಿಯಾದ ಮಕ್ಕಳಾಗಿದ್ದರು. ವ್ಯವಸಾಯ ಇಲಾಖೆಯಲ್ಲಿ ಒಬ್ಬ ಉನ್ನತ ಅಧಿಕಾರಿಯಾಗಿದ್ದ ಅವರ ತಂದೆ ವಾಸವಾಗಿದ್ದ ಸುಂದರವಾದ ಬೆಟ್ಟದ ಮೇಲಿನ ಪಟ್ಟಣದಲ್ಲಿ ಅವರು ವಾಸವಾಗಿದ್ದರು; ಅವನ ಸ್ಥಾನದ ಮರ್ಯಾದೆಗಾಗಿ ಪ್ರತಿಯೊಬ್ಬರೂ ಅವನನ್ನು 'ಡಾಕ್ಟರ್ ಸಾಹಿಬ್' ಎಂದು ಕರೆಯುತ್ತಿದ್ದರು. ಅವರ ಸಮರ್ಪಿತ ಮನೋಭಾವದ ತಾಯಿಯು ತುಂಬಾ ತಾಳ್ಮೆಯುಳ್ಳವಳು. ಅದರ ಅವಶ್ಯಕತೆಯೂ ಇತ್ತು, ಏಕೆಂದರೆ ಅವಳ ಮಕ್ಕಳು, ಅದರಲ್ಲೂ ಟುನ್ನು ಆಗಾಗ್ಗೆ ತುಂಟಾಟ ಆಡುತ್ತಿದ್ದಳು. ಅವರ ಬಳಿ ಎರಡು ಪ್ರೀತಿಪಾತ್ರವಾದ ಸಾಕುಪ್ರಾಣಿಗಳಿದ್ದವು, ಒಂದು ಟುನ್ನುವನ್ನು ಎಲ್ಲೆಲ್ಲೂ ಹಿಂಬಾಲಿಸುತ್ತಿದ್ದ ಜರ್ಮನ್ 'ಷಪರ್ಡ್' ಜಾತಿಯ 'ಟೈಗರ್' ಹೆಸರಿನ ನಾಯಿ ಮತ್ತು ಇನ್ನೊಂದು ಉಗ್ರಾಣದಲ್ಲಿ ವಾಸಿಸುತ್ತಿದ್ದ ಒಂದು ಚಿಕ್ಕ ಜಿಂಕೆ. ಟುನ್ನು ಗಂಡು ಹುಡುಗನಂತಿದ್ದಳು. ಹೊರಗಡೆ ಆಡುವುದೇ ಅವಳಿಗೆ ಇಷ್ಟ. ತಂದೆ ಇಬ್ಬರು ಮಕ್ಕಳಿಗೂ ಈಜು ಕಲಿಸಿದ್ದರು. ತೋಟದಲ್ಲಿನ ಕೊಳ ಅವರಿಗೆ ತುಂಬಾ ಇಷ್ಟ. ಅವಳ ತಾಯಿಯಾದರೋ ತನ್ನ ಮಗಳು ನಮ್ರಳಾಗಿ ಹುಡುಗಿಯಂತೆ ಇರಬೇಕೆಂದು ಬಯಸುತ್ತಿದ್ದಳು. 'ರಸ್ತೆಯ ಸುತ್ತಲೂ ಅಷ್ಟೆಲ್ಲಾ ಓಡಾಡುವ ಹುಡುಗಿಯರನ್ನು ಯಾರಾದರೂ ನೋಡಿದ್ದಾರೆಯೇ? ಅವಳನ್ನು ನಿಜವಾಗಿಯೂ ಹುಡುಗನೆಂದೇ ತಿಳಿದುಕೊಳ್ಳಬಾರದೇಕೆ?' ಎಂದು ಅವಳು ಹೇಳುತಿದ್ದಳು.

ತಂದೆ ತಾಳ್ಮೆಯಿಂದ ನಗುತ್ತಾ, 'ಹೌದು' ಎಂದು ಉತ್ತರ ಕೊಡುತ್ತಿದ್ದರು. 'ನಮ್ಮದಾದರೋ ಒಂದು ತಲೆಕೆಳಗು ಸಂಸಾರ, ಬಹುಶಃ ಅವಳು ಒಬ್ಬ ಹುಡುಗನಾಗಬೇಕಾಗಿತ್ತು, ಮತ್ತೆ ಈ ಸಫ್‌ದರ್ ಒಬ್ಬ ಹುಡುಗಿಯಾಗಬೇಕಾಗಿತ್ತು'.

'ಅದರಲ್ಲೇನೂ ಆಶ್ಚರ್ಯವಿಲ್ಲ, ನೀವು ಅವಳನ್ನು ಮುದ್ದು ಮಾಡಿ ಹಾಳುಮಾಡಿರುವ ರೀತಿ ಇದು,' ಎಂದು ತಾಯಿ ಉತ್ತರಿಸುವಳು.

ಒಂದು ಭಾನುವಾರ ಅವರ ತಂದೆ ಬೇಟೆಯಾಡುವುದಕ್ಕೆ ಹೋಗಲು ಬೆಳಗ್ಗೆ ಬೇಗ ಮನೆಗೆ ಬಂದೇ ಬಿಟ್ಟರು. ಅದು ಕಾಡು ಬಾತುಕೋಳಿಗಳ ಕಾಲವಾಗಿತ್ತು, ಹತ್ತಿರದ ಸರೋವರ ಅವುಗಳಿಂದ ತುಂಬಿತ್ತು. ಹವಾ ತುಂಬಾ ಹಿತಕರವಾಗಿತ್ತು. ಅವರ ಸಂಬಂಧಿ ಸೋದರನಂತಿದ್ದ ಸಫ್‌ದರ್‌ನ ವಯಸ್ಸಿನ ಹುಡುಗ ಕೂಡಾ ಅವರನ್ನು ಭೇಟಿ ಮಾಡುವುದರಲ್ಲಿದ್ದನು. ಬೆಳಗ್ಗೆಯ ತಿಂಡಿಯಾದ ಮೇಲೆ ಈ ಹುಡುಗರು ಹೊರಗಡೆ ತೋಟದಲ್ಲಿ ಆಡಬೇಕೆಂದು ನಿಶ್ಚಯಿಸಿದರು. ದೊಡ್ಡ ಮರದ ನೆರಳಿನಲ್ಲಿ ಅವರು ಕಂಬಳಿಯನ್ನು ಹಾಸಿದರು. ಬಣ್ಣ ಹಚ್ಚುವ ಪುಸ್ತಕಗಳನ್ನು ಹಾಗೂ ಮೆಕ್ಕಾನೋ ಸೆಟ್ಟನ್ನು (ಆಟಕ್ಕಾಗಿ ಉಪಯೋಗಿಸುವ ಯಾಂತ್ರಿಕ ಮಾದರಿಗಳು) ತಂದಿದ್ದರು. ರೂನೂ ಪಕ್ಷಿಯ ಚಿತ್ರವನ್ನು ಬಣ್ಣ ಹಚ್ಚಲು ಪ್ರಾರಂಭಿಸಿದರು. ಆದರೆ ಅವಳು ಆಟದ ಸಾಮಾನಿನ ಬಿಲ್ಡಿಂಗ್ ಸೆಟ್‌ನಲ್ಲಿ ಹೆಚ್ಚು ಆಸಕ್ತಿವಹಿಸಿದ್ದಳು. ಹುಡುಗರು ಏನು ಕಟ್ಟುತ್ತಿದ್ದಾರೆ ಎಂಬುದನ್ನು ನೋಡುತ್ತಾ ಅದನ್ನು ಉತ್ತಮಗೊಳಿಸಲು ಸಲಹೆಗಳನ್ನು ಕೊಡುತ್ತಿದ್ದಳು.



ಬಾಗಿಲಿನ ಹೊರಗೆ ಕತ್ತೆ ಜೋರಾಗಿ ಅರಚುತ್ತಿರುವುದನ್ನು ಕೇಳಿದಾಗ, ಭಾನುವಾರ ಬೆಳಗ್ಗೆ ಕತ್ತೆಯ ಬೆನ್ನಿನ ಮೇಲೆ ಚೊಕ್ಕಟವಾಗಿ ಇಸ್ತ್ರಿ ಮಾಡಿದ ಬಟ್ಟೆಗಳ ರಾಶಿಯನ್ನು ಹೊತ್ತು ತರುತ್ತಿದ್ದ ಅಗಸನ ಬರುವಿಕೆಯನ್ನು ಘೋಷಿಸಿತು. ಹುಡುಗರು ಮೇಲಕ್ಕೆದ್ದು ಬಾಗಿಲು ತೆಗೆಯಲು ಓಡಿದರು. ದಪ್ಪನೆಯ ಹೊಟ್ಟೆಯ ಬೋಳುತಲೆಯ, ಅಗಸರವನು ಬರುತ್ತಿದ್ದ. ಅವನು ಹುಡುಗರಿಗೆ ತುಂಬಾ ವಿನೋದದ ಒಂದು ಮೂಲವಾಗಿದ್ದನು. ಅವನನ್ನು ಕುಚೇಷ್ಟೆ ಮಾಡಿ, ಹಾಸ್ಯ ಮಾಡಲು ಇಷ್ಟಪಡುತ್ತಿದ್ದರು.

ಕತ್ತೆಯು ಅದರ ಯಜಮಾನನನ್ನು ಬಾಗಿಲಿನ ಮುಖಾಂತರ ಹಿಂಬಾಲಿಸಿತ್ತು, ಸಫ್‌ದರ್ ತನ್ನ ತಂಗಿ ಕಡೆ ನೋಡಿ ಹೇಳಿದನು;'ಅಗಸರವನು ಇಲ್ಲಿದ್ದಾನೆಂದು ಅಮ್ಮನಿಗೆ ಹೇಳು'.

ಟುನ್ನು ಉತ್ತರ ಕೊಟ್ಟಳು,'ಹೋಗಿ ನೀನೇ ಹೇಳು, ನಾನು ಕೆಲಸ ಮಾಡುತ್ತಿದ್ದೇನೆಂದು, ನಿನಗೆ ಗೊತ್ತಿಲ್ಲವೇ?' ಅದನ್ನು ಸಾಕ್ಷಿಯಾಗಿ ತೋರಿಸಲು, ಪುಸ್ತಕದಲ್ಲಿನ ಪಕ್ಷಿಗೆ ಬಣ್ಣಹಾಕಲು ಹಿಂದಕ್ಕೆ ಹೋದಳು.

'ಓ, ಹಾಗೇ, ಆಗಲಿ,' ಅವಳ ತಮ್ಮ ಹೇಳಿದ.

ಸಫ್‌ದರ್ ಮತ್ತು ಅವನ ದೂರದ ತಮ್ಮ ಮನೆಯೊಳಗೆ ಹೋದರು, ಆದರೆ ಅವರ ತಾಯಿ ನೆರೆಮನೆಗೆ ಹೋಗಿರುವುದನ್ನು ನೋಡಿದರು. ಆದ್ದರಿಂದ, ಅವರು ಟುನ್ನು ಒಬ್ಬಳನ್ನೇ ತೋಟದಲ್ಲಿ ಬಿಟ್ಟು ತಾಯಿಯನ್ನು ನೋಡಲು ಹೊರಟರು.

ಬಣ್ಣಹಾಕುವುದರಿಂದ ಬೇಸರಗೊಂಡು, ಟುನ್ನು ಆ ಪುಸ್ತಕವನ್ನು ಕಂಬಳಿಯ ಮೇಲೆ ಬಿಟ್ಟು, ಟೈಗರ್ ಹತ್ತಿರದಲ್ಲಿದ್ದ ಅಳಿಲಿನೊಡನೆ ಆಟವಾಡುತ್ತಿರುವುದನ್ನು ಹತ್ತಿರದಿಂದ ನೋಡಲು ಅದರ ಜೊತೆ ಸೇರಿಕೊಂಡಳು. ಆಮೇಲೆ ಕಾಯುತ್ತಿದ್ದ ಅಗಸರವನ ಜೊತೆ ಮಾತನಾಡಲು ಪ್ರಯತ್ನಿಸಿದಳು. ಆದರೆ ಅವನು ಎಂತಹ ವಿಚಿತ್ರವಾದ ಭಾಷೆಯಲ್ಲಿ ಮಾತನಾಡಿದನೆಂದರೆ, ಆ ಮಾತಿನ ರೀತಿಯನ್ನು ಹುಡುಗರು ಯಾವಾಗಲೂ ತಮಾಷೆ ಮಾಡುತ್ತಿದ್ದರು. ಅವನು ಮಾತ್ರ ಮೌನವಾಗಿರಲು ಇಷ್ಟಪಡುತ್ತಿದ್ದನು. ಕೂಡಲೇ ಅವನು ಕತ್ತೆಯನ್ನು ಮರವೊಂದಕ್ಕೆ ಕಟ್ಟಿ ಸ್ವಚ್ಛಗೊಳಿಸಿದ ಇಸ್ತ್ರಿ ಮಾಡಿದ ಬಟ್ಟೆಗಳ ದೊಡ್ಡ ಗಂಟನ್ನು ವರಾಂಡದಿಂದ ಮನೆಯೊಳಗೆ ಹೊತ್ತುಕೊಂಡು ಹೋದನು.

ಟುನ್ನುವಿಗೆ ಕತ್ತೆ ಕಡೆ ಗಮನ ಬಿದ್ದಿತು. ಅವಳ ಕಣ್ಣುಗಳು ಮಿಂಚಿನಂತೆ ಹೊಳೆದವು. ಅಲ್ಲಿ ಯಾರೂ ಇರಲಿಲ್ಲ. ಬಹುಶಃ ಚಿಕ್ಕ ಸಲಕರಣೆಗಳನ್ನಿಡುವ ಷೆಡ್‌ನಲ್ಲಿ ಅಗಸರವನು ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದನು. ಬೇಗನೆ ಅವಳು ಕತ್ತೆಯನ್ನು ಸವಾರಿ ಮಾಡಲು ಹಿತ್ತಲಿನ ಅಂಗಳಕ್ಕೆ ಎಳೆದುಕೊಂಡು ಹೋದಳು. ಆದರೆ ಅಷ್ಟರಲ್ಲಿ ಅವಳ ತಾಯಿಯ ಧ್ವನಿಯನ್ನು ಕೇಳಿ, ಭಯಪಟ್ಟು ಕತ್ತೆಯನ್ನು



ಮುಚ್ಚಿಡಲು ಜಾಗಕ್ಕಾಗಿ ಹುಡುಕಿದಳು. ಲಾಂಡ್ರಿಯವನು ಕತ್ತೆಯನ್ನು ಹುಡುಕಾಡಿ ದೊಡ್ಡ ರಗಳೆಯನ್ನು ಮಾಡುವನೆಂದು ಅವಳು ಅರ್ಥಮಾಡಿಕೊಂಡಳು. 'ಆದರೆ ಆನಂತರ ಆವನು ಬಿಟ್ಟು ಮನೆಗೆ ಹೋಗುವನು, ಇಷ್ಟಬಂದಷ್ಟು ಕಾಲ ಕತ್ತೆಯ ಮೇಲೆ ಸವಾರಿ ಮಾಡಲು ಸಮಯ ಸಿಗುವುದು' ಎಂದು ಲೆಕ್ಕಾಚಾರ ಹಾಕಿದಳು.

ಈ ಮನೆಗೆ ಅವನ ವಾರ ವಾರದ ಭೇಟಿಗಳಿಂದ, ಕತ್ತೆಗೆ ಈ ಹುಡುಗರು ಮತ್ತು ಅವರ ಹಾಸ್ಯಮಾಡುವ ರೀತಿಗಳು ಅಭ್ಯಾಸವಾಗಿಬಿಟ್ಟಿತ್ತು. ಆದರೆ ಅಂದು ಚಿಕ್ಕ ಹುಡುಗಿ ಅದರ ಕಡೆ ತೋರಿಸುತ್ತಿದ್ದ ಮೃದುವಾದ ನಡವಳಿಕೆಯಿಂದ ಅವಳು ತನ್ನನ್ನು ಉಗ್ರಾಣಕ್ಕೆ ಕರೆದುಕೊಂಡು ಹೋಗಿ ಏನಾದರೂ ರುಚಿಕರವಾದ ಆಹಾರವನ್ನು ಅವರ ಜಂಕೆಗೆ ಕೊಡುವಂತೆ ಕೊಡುವಳೆಂದು ಕತ್ತೆಯು ಯೋಚಿಸಿತು. ಬಡಪಾಯಿಗೆ ಅದರ ಅದೃಷ್ಟದಲ್ಲಿ ಅಲ್ಲಿ ಏನಿದೆ ಎಂಬುದೇ ತಿಳಿಯಲಿಲ್ಲ.

ಟುನ್ನು ಕತ್ತೆಯನ್ನು ಸುತ್ತಲೂ ಕರೆದುಕೊಂಡು ಹೋದಳು, ಆದರೆ ಅದನ್ನು ಮುಚ್ಚಿಡಲು ಯಾವ ಸುರಕ್ಷಿತವಾದ ಜಾಗವೂ ಕಾಣಸಲಿಲ್ಲ. ಹೆಚ್ಚಿಗೆ ಸಮಯವಿರಲಿಲ್ಲ. ಯಾವ ಕ್ಷಣದಲ್ಲಾದರೂ ಯಾರಾದರೂ ಅವಳನ್ನು ಕತ್ತೆಯೊಡನೆ ನೋಡಬಹುದು. ಅಷ್ಟರಲ್ಲಿ ಅಂಗಳದ ಕಡೆ ಕೊನೆಯಲ್ಲಿರುವ ಅತಿಥಿಗಳ ಸ್ನಾನದ ಮನೆಗೆ ಹೋಗುವ ಹೊರ ಬಾಗಿಲನ್ನು ಗಮನಿಸಿದಳು. ಹೌದು, ಅಲ್ಲಿ ಕತ್ತೆ ಸುರಕ್ಷಿತವಾಗಿರುವುದು, ಅತಿಥಿಯ ಸ್ನಾನದ ಗೃಹದಲ್ಲಿ ಕತ್ತೆಯನ್ನು ಹುಡುಕಲು ಯಾರೂ ಬರುವುದಿಲ್ಲ.

ಅಂಗಳದಿಂದ ಆ ಕಡೆ ಆತುರವಾಗಿ ಹೋಗುತ್ತಾ, ನಿಶ್ಶಬ್ದವಾಗಿ ಬಾಗಿಲನ್ನು ತೆಗೆದಳು, ಕತ್ತೆಯನ್ನು ಒಳಕ್ಕೆ ತಳ್ಳಿ ಬೇಗನೆ ಹೊರಗಿನಿಂದ ಚಿಲಕ ಹಾಕಿದಳು. ಆಮೇಲೆ, ಅವಳು ಮರದ ಕೆಳಗಿರುವ ಕಂಬಳಿ ಕಡೆ ಓಡಿದಳು. ಹುಡುಗರು

ಇನ್ನೂ ವಾಪಸು ಬಂದಿರಲಿಲ್ಲ. ಅವಳು ಏನೂ ಆಗಿಲ್ಲವೆಂಬಂತೆ ನೆಮ್ಮದಿಯ ಉಸಿರನ್ನು ಬಿಟ್ಟು, ಪಕ್ಷಿಗೆ ಬಣ್ಣ ಹಾಕಲಾರಂಭಿಸಿದಳು. ಅವರು ವಾಪಸು ಬಂದಾಗ ಅವಳು ತುಂಬಾ ಮುಗ್ಧಳಂತೆ ಕಂಡಳು.

ಕೂಡಲೇ ಭಯಂಕರ ಕೂಗು ಕೇಳಿಸಿತು. ಮನೆಯಿಂದ ಹೊರಗೆ ತಂದಿದ್ದ ಕೊಳೆಯಾದ ಬಟ್ಟೆಗಳ ದೊಡ್ಡ ಗಂಟನ್ನು ಹೊತ್ತ ಅಗಸರವನು ಕತ್ತೆಯನ್ನು ಕರೆಯುವ ಧ್ವನಿ ಅದಾಗಿತ್ತು. ತನ್ನ ಕತ್ತೆಯನ್ನು ಅಲ್ಲಿ ಕಾಣದೆ ಕೂಗುತ್ತಿದ್ದ. ವರಾಂಡದಲ್ಲಿ ಬಟ್ಟೆಗಳನ್ನು ಎಸೆದು, ತನ್ನ ಪ್ರೀತಿಯ ಕತ್ತೆಗಾಗಿ ಹುಡುಕುತ್ತಾ ಎಲ್ಲಾ ದಿಕ್ಕಿನಲ್ಲೂ ನೋಡಲಾರಂಭಿಸಿದನು. ಹುಡುಕಿದ್ದು ವ್ಯರ್ಥವಾಯಿತು. ಅಷ್ಟಕ್ಕೂ ಟುನ್ನು ಕತ್ತೆಯೆಲ್ಲಿದೆ ಎಂಬುದರ ಬಗ್ಗೆ ಯಾವ ವಿಷಯವೂ ಗೊತ್ತಿಲ್ಲವೆಂದು ಪ್ರಮಾಣ ಮಾಡಿದಳು. ಹಗ್ಗದ ಗಂಟನ್ನು ಸಡಿಲಮಾಡಿಕೊಂಡು ಕಾಡಿನ ಕಡೆ ಓಡಿದ್ದನ್ನು ನೋಡಿದುದಾಗಿ ಹೇಳಿದಳು. ಮತ್ತೆ ಇನ್ನು ಕತ್ತೆಗಾಗಿ ಕಿರಿಚುತ್ತಾ, ಅಗಸರವನು ಕಾಡಿನ ಕಡೆ ಓಡಿದನು.

ಕ್ಷಣಕಾಲ ಮನೆಯಲ್ಲಿ ಶಾಂತಿ ಮರಳಿತು. ಇದ್ದಕ್ಕಿದ್ದಂತೆ ಅನಿರೀಕ್ಷಿತ ಅತಿಥಿ ಬಂದರು. ಬಂದಾಗಲೆಲ್ಲಾ ಅತಿಥಿ ಗೃಹದಲ್ಲಿ ತಂಗುತಿದ್ದ ಅವರು ತಂದೆಯ ಹಳೆಯ ಸ್ನೇಹಿತರಾದ ಮಿ. ಅಲಿಯವರು. ಅವರು ಎತ್ತರವಾಗಿದ್ದರು, ಚಿಕ್ಕ ಬಿಳೀ ಗಡ್ಡದ ತೆಳ್ಳನೆಯ ಮನುಷ್ಯ, ಮೀಸೆ ಇಲ್ಲದ ಬೋಳು ತಲೆಯವರು.

ಅವರ ಬರುವಿಕೆ ಎಷ್ಟು ಗಡಿಬಿಡಿಗೆ ಆಸ್ಪದವಾಗುವಂತೆ ಮಾಡಿತು; ಅವಳ ತಾಯಿ ಅವರನ್ನು ತುಂಬಾ ಆದರದಿಂದ ಸ್ವಾಗತಿಸಿದರು; ಅಂಗಳದ ಕೊನೆಯಲ್ಲಿರುವ ಒಂದು ಉತ್ತಮವಾದ ಅತಿಥಿ ಕೊಠಡಿಯನ್ನು ಅವರಿಗೆ ತೋರಿಸಲಾಯಿತು.ಟುನ್ನು ತುಂಬ ಭಯಗೊಂಡಿದ್ದಳು. ಮಿ.ಅಲಿ ಬಂದೊಡನೆಯೇ ಅವಳು ತೊಂದರೆಯನ್ನು ಗ್ರಹಿಸಿದಳು. ಆದರೆ,ಅವಳು ಏನೂ ಮಾಡುವಂತಿರಲಿಲ್ಲ. ಒಂದು ಕಡೆ, ಅವರ ತಾಯಿ ಮತ್ತು ಆಳುಗಳು ಅತಿಥಿ ಕೊಠಡಿಯನ್ನು ಆತುರವಾಗಿ ಸಜ್ಜುಗೊಳಿಸುತ್ತಿದ್ದರು. ಇನ್ನೊಂದು ಕಡೆ, ಅವಳಿಗೆ ಸಫ್‌ದರ್ ಹಾಗೂ ತನ್ನ ದೂರದ ಸೋದರನಿಂದ ತಪ್ಪಿಸಿಕೊಳ್ಳಬೇಕಾಗಿತ್ತು. ಅಷ್ಟು ಬೇಗ ಮಿ.ಅಲಿ ಸ್ನಾನದ ಮನೆಗೆ ಹೋಗುವುದಿಲ್ಲ, ಅಲ್ಲಿಂದ ಕತ್ತೆಯನ್ನು ಹೊರಗೆ ಕರೆದುಕೊಂಡು ಹೋಗುವವರೆಗಂತೂ ಖಂಡಿತ ಇಲ್ಲ ಎಂದು ಅನಿಸುತ್ತಾ ಅದಕ್ಕಾಗಿ ಪ್ರಾರ್ಥಿಸುವುದು ಮಾತ್ರ ಅವಳ ಪಾಲಿಗೆ ಉಳಿದಿತ್ತು.

ಕತ್ತೆಯಾದರೋ ಕತ್ತಲು ಮನೆಯ ಒಂದು ಮೂಲೆಯಲ್ಲಿ ಟುನ್ನು ತನಗೆ ರುಚಿಕರವಾದ ಊಟವನ್ನು ತಂದುಕೊಡುತ್ತಾಳೆಂದು ಕನಸು ಕಾಣುತ್ತಾ ಶಾಂತವಾಗಿ ನಿಂತಿತ್ತು.

ಮಿ.ಅಲಿ ತುಂಬಾ ಶುಚಿಯಾದ ಮನುಷ್ಯ. ಯಾವಾಗಲೂ ದಿನಕ್ಕೆ ಎರಡು ಸಲ ಸ್ನಾನ ಮಾಡುತ್ತಿದ್ದರು, ಅಂದು ಆಯಾಸಕರ ಪ್ರಯಾಣದ ನಂತರ, ಎಂದಿನಂತೆ

ಚೆನ್ನಾಗಿ ಸ್ನಾನ ಮಾಡಲು ಇಷ್ಟಪಟ್ಟರು. ಮಡಿ ಬಟ್ಟೆಗಳನ್ನು ಹೊರಗೆ ತೆಗೆದರು, ಬೂಟ್ಸನ್ನು ಬದಲಾಯಿಸಿ ಮರದ ಪಾದರಕ್ಷೆಗಳನ್ನು ಹಾಕಿಕೊಂಡು, ನೇರವಾಗಿ ಸ್ನಾನದ ಮನೆಗೆ ಹೊರಟರು. ಒಳಬಾಗಿಲ ಮೂಲಕ ಚಿಕ್ಕ ಕತ್ತಲು ಕೊಠಡಿಗೆ ಪ್ರವೇಶಿಸಿದರು. ಮಲಗುವ ಕೊಠಡಿಯ ಬಾಗಿಲಿಗೆ ಹಿಂದಿನಿಂದ ಚಿಲಕ ಹಾಕಿಕೊಂಡರು.

ತುಂಬಾ ಕತ್ತಲಾಗಿತ್ತಾದರೂ ಆ ಕೊಠಡಿಯ ಸಿದ್ಧತೆಗಳು ಹೇಗಿವೆ ಎಂಬುದು ಚೆನ್ನಾಗಿ ಗೊತ್ತಿತ್ತು. ಬೆಳಕಿಗಾಗಿ ಯೋಚಿಸಲಿಲ್ಲ. ಹಾಕಿದ್ದ ಹಲಗೆಯ ಮೇಲೆ ಮಡಿ ಬಟ್ಟೆಗಳನ್ನು ಇಟ್ಟು ತೊಟ್ಟಿಯ ಕಡೆ ಹೊರಟರು. ಮಸುಕಿನಲ್ಲಿ, ನಂಬಲಾಗದ ಒಂದು ದೃಶ್ಯವನ್ನು ನೋಡಿದರು. ಬಡಪಾಯಿ ಮಿ. ಅಲಿ ಅವರ ಹೃದಯದ ಬಡಿತವೇ ನಿಂತುಹೋಯಿತು.

ಅಷ್ಟರಲ್ಲಿ ಕತ್ತೆ, ತನ್ನ ಹಗಲುಗನಸನ್ನು ಮುಂದುವರಿಸಿತ್ತು. ಪಕ್ಕದ ಕೋಣೆಯಲ್ಲಿ ಸದ್ದಾದಾಗ ಸಂತೋಷದಿಂದ 'ನನಗಾಗಿ ಆಹಾರ ಸಿದ್ಧಮಾಡುತ್ತಿದ್ದಾರೆ. ಬಾಗಿಲು ತೆರೆಯುತ್ತಲೇ ಯಾರು ಬರಬಹುದು! ಮರದ ಪಾದರಕ್ಷೆಗಳೊಂದಿಗೆ ಒಬ್ಬ ಎತ್ತರವಾದ, ತೆಳ್ಳನೆಯ ಮನುಷ್ಯ. ಅವರ ಬಳಿ ಹುಲ್ಲು, ಕಾಳು, ಮೇವು ಯಾವುದೂ ಇಲ್ಲ', ಅಷ್ಟರಲ್ಲಿ ಕತ್ತೆಗೆ ಸಾಕಾಗಿ ಹೋಗಿತ್ತು. ಬೋಳುತಲೆಯ ಮಿ.ಅಲಿಯನ್ನು ನೋಡುತ್ತಲೇ, ದೀರ್ಘ ಕಾಲ ಕಷ್ಟಪಟ್ಟಿದ್ದ ಅದು ತಾಳ್ಮೆಯನ್ನು ಕಳೆದುಕೊಂಡು ಜೋರಾಗಿ ಅರಚುತ್ತಾ ಹಾರಿ ಅವರ ಕಾಲ ಮೇಲೆ ನಿಂತಿತು.

ಕತ್ತಲಲ್ಲಿ ಮಿ.ಅಲಿಗೆ ಸರಿಯಾಗಿ ಅದು ಯಾವ ಪ್ರಾಣಿ ಎಂಬುದು ಗೊತ್ತಾಗಲಿಲ್ಲ. ಯಾವುದೋ ಒಂದು ದೊಡ್ಡ, ಕೊಳಕು ಪ್ರಾಣಿ ರಾಕ್ಷಸನಂತೆ, ವಿಚಿತ್ರವಾಗಿ ಕೂಗುತ್ತಿದೆ ಎಂಬುದಷ್ಟೇ ಅವರಿಗೆ ತಿಳಿಯಿತು. ಪೂರಾ ಧೈರ್ಯಗೆಟ್ಟ ಮಿ. ಅಲಿ ಸಹಾಯಕ್ಕಾಗಿ ಕಿರಿಚಿದರು.

ತಮ್ಮ ಮರದ ಪಾದರಕ್ಷೆಗಳನ್ನು ಹಿಂದಕ್ಕೆ ಬಿಟ್ಟು, ಬಾಗಿಲಿನ ಕಡೆ ಓಡಿದರು, ಆದರೆ, ಗಡಿಬಿಡಿಯಲ್ಲಿ ಅವರು ಟುನ್ನು ಹೊರಗಿನಿಂದ ಚಿಲಕ ಹಾಕಿದ್ದ ಬಾಗಿಲಿನ ಕಡೆ ಓಡಿದರು. ಕಷ್ಟಪಟ್ಟಾಗ್ಯೂ ಬಾಗಿಲನ್ನು ತೆಗೆಯಲಾಗಲಿಲ್ಲ. ತಾನು ಒಳಗಿನಿಂದ ಚಿಲಕ ಹಾಕಿಕೊಂಡಿರುವಾಗ ಹೊರಗಿನಿಂದ ಚಿಲಕ ಹಾಕಿಕೊಳ್ಳುವುದು ಹೇಗೆ ಸಾಧ್ಯ? ಅವರ ಕೆಟ್ಟ ಊಹೆಗಳು ನಿಜವಾದುವು. ಖಂಡಿತ ಅದು ಯಾವುದೋ ಪಿಶಾಚಿ ಅಥವಾ ಭೂತದ ಕೈವಾಡ ಇರಬೇಕು ಎಂದು ನಿಶ್ಚಯಿಸಿದರು.

ಮಿ.ಅಲಿಯ ಕಿರುಚಾಟದ ಶಬ್ದಗಳು ಮತ್ತು ಕತ್ತೆಯ ರೋಷದ ಕೂಗಾಟ, ದಶ ದಿಕ್ಕುಗಳಿಗೂ ಪರಡಿತು – ತಾಯಿ, ಮಕ್ಕಳು ಮತ್ತು ಎಲ್ಲಾ ಆಳುಗಳು, ಮಿ.ಅಲಿ ಅವರಿಗೇನಾಯಿತು? ಎಂದು ಗಾಬರಿಗೊಂಡರು. ಸ್ನಾನದ ಮನೆಯಲ್ಲಿ ಏನು ತೊಂದರೆ ಇರಬೇಕು ಎಂಬುದು, ಟುನ್ನುಗೆ ಮಾತ್ರ ಗೊತ್ತಿತ್ತು.

ತೋಳ ತನ್ನನ್ನು ಮುತ್ತಿಗೆ ಹಾಕಿದೆ ಎಂದು ಮಿ.ಅಲಿ ಖಚಿತವಾಗಿ ಭಾವಿಸಿದರು. ಒಂದು ಬಕೆಟ್ ಮೇಲೆ ಉರುಳುತ್ತಾ ಶಬ್ದಮಾಡಿದ್ದನ್ನು ಕೇಳಿದರು. ಆಮೇಲೆ

ಪ್ರಾಣಿ ಅವರ ಮೇಲೆ ಹಾರಿ ಬಿತ್ತು. ಸಾಧಾರಣವಾದ ತೋಳವಲ್ಲ, ಖಂಡಿತವಾಗಿ, ಯಾವುದೋ ಕೆಟ್ಟ ಭೂತ. ಇನ್ನೊಂದು ಬಕೆಟನ್ನು ಹಾರುತ್ತಾ, ಆ ಧಾಳಿಯನ್ನು ತಡೆಯಲು ಪ್ರಯತ್ನಿಸುತ್ತಾ ತಮ್ಮ ಎತ್ತರವಾದ ಧ್ವನಿಯಲ್ಲಿ ಸಹಾಯಕ್ಕಾಗಿ ಕೂಗಿದರು.

ಆಳುಗಳು ಮಲಗುವ ಕೊಠಡಿಯ ಬಾಗಿಲನ್ನು ಒಡೆಯಲು ಪ್ರಯತ್ನಿಸುತ್ತಿದ್ದರು. ಹೊರಗಡೆ ತಾಯಿ ಕೈ ಕೈ ಹಿಸುಕಿಕೊಳ್ಳುತ್ತಾ ನಿಂತಿದ್ದರು. ನಾಯಿ 'ಟೈಗರ್' ಜೋರಾಗಿ ಬೊಗಳುತ್ತಾ ಓಡಿ ಬಂತು. ಈ ಸಲ ಮಾತ್ರ ತಾಯಿ ಅದಕ್ಕೆ ಸುಮ್ಮನಿರುವಂತೆ ಹೇಳಲಿಲ್ಲ. 'ಟೈಗರ್, ಒಳಗೆ ಹೋಗು ಏನಾಗಿದೆ ನೋಡು', ಎಂದು ಅದನ್ನು ಹೊರಗೆ ಬಿಟ್ಟರು. ಅದು ಮಲಗುವ ಕೋಣೆಯೊಳಗೆ ಓಡುವ ಬದಲು, ಅಂಗಳದ ಸುತ್ತಲೂ ಓಡಿತು. ಟುನ್ನು ಹೊರಗಿನಿಂದ ಚಿಲಕ ಹಾಕಿದ್ದ ಬಾಗಿಲ ಕಡೆ ಓಡಿತು. ಅಲ್ಲಿ ನಿಂತು ಇನ್ನೂ ಭಯಂಕರವಾಗಿ ಬೊಗಳಲಾರಂಭಿಸಿತು.

ಅಲಿ ಸಾಹೇಬರಿಗೆ ಮತ್ತಷ್ಟು ಗಾಬರಿಯಾಯಿತು. ಸ್ನಾನದ ಮನೆಯೊಳಗೆ ಚಿತ್ರವಿಚಿತ್ರ ಸದ್ದು ಗದ್ದಲ, ಮತ್ತೊಂದು ಕಡೆ ಹೊರಗೆ ಜನಗಳ ಧ್ವನಿ, ಗಲಾಟೆ, ಇನ್ನೊಂದು ಕಡೆ ಪ್ರಾಣಿಗಳ ಧ್ವನಿ, ಕಿರುಚಾಟ, ಖಂಡಿತ ಇಂದು ನನ್ನನ್ನು ಮುಗಿಸಲು ಇಡೀ ಜಗತ್ತಿನ ಭೂತಪ್ರೇತಗಳು ಹಾಗೂ ದುಷ್ಟ ಶಕ್ತಿಗಳೆಲ್ಲಾ ಒಂದೆಡೆ ಸೇರಿಕೊಂಡಿವೆ ಎಂದುಕೊಂಡರು. ಮತ್ತಷ್ಟು ಹತಾಶೆಯಿಂದ ಕಿರುಚಾಡತೊಡಗಿದರು. ಈ ಗಲಾಟೆಗೆ ಗಾಬರಿಯಾಗಿ ಕತ್ತೆಯು ಜೋರಾಗಿ ಚಿತ್ರ ವಿಚಿತ್ರವಾಗಿ ಒದರಲು ಪ್ರಾರಂಭಿಸಿತು. ಇದರಿಂದ ಗಲಾಟೆಯೋ ಗಲಾಟೆ.

ಟುನ್ನು ಹೆದರಿದಳು, ನಾಯಿಯನ್ನು ಬಿಟ್ಟಿದ್ದಕ್ಕಾಗಿ ಅದು ಅನವಶ್ಯಕವಾಗಿ ಗಲಾಟೆ ಮಾಡುತ್ತಿರುವುದಕ್ಕೆ ಅವಳಿಗೆ ಸಿಟ್ಟು ಬಂದಿತ್ತು. ನಾಯಿ ತೋರಿಸುತ್ತಿದ್ದ ಜಾಗವನ್ನು ತಾಯಿ ನೋಡುತ್ತಿದ್ದರು, ಬೇಗ ಸ್ನಾನದ ಮನೆಯ ಚಿಲಕವನ್ನು ತೆಗೆದರು. ಅದು ತೆಗೆಯುತ್ತಲೇ, ಬೆವರು ಸುರಿಸುತ್ತಾ ಹೆದರಿಕೊಂಡು, ಬಿಟ್ಟ ಬಾಯಿ ಬಿಟ್ಟುಕೊಂಡಿದ್ದಂತೆಯೇ ಮಿ.ಅಲಿ ಸಾಹೇಬರು ಹೊರಗೆ ನುಗ್ಗಿ ಬಂದರು. ಅವರ ಹಿಮ್ಮಡಿಗಳ ಹಿಂದೆಯೇ ನೇರವಾಗಿ ಅಗಸರವನ ಕತ್ತೆಯೂ ಬಂತು. ಮಿ.ಅಲಿ ಮತ್ತು ಕತ್ತೆ ನೇರವಾಗಿ ತೋಟದ ಕಡೆ ಗೋಣು ಮುರಿಯುವಂತಹ ವೇಗದಲ್ಲಿ, ಗಿಡಗಳನ್ನು ತುಳಿಯುತ್ತಾ, ಹೂವಿನ ಕುಂಡಗಳನ್ನು ಉರುಳಿಸುತ್ತಾ ಓಡುತ್ತಿರುವುದನ್ನು ಎಲ್ಲರೂ ನೋಡಿದರು. ಕತ್ತೆ ಮುಂದೆ ಓಡಿತು,ಹಳ್ಳಿಯಲ್ಲಿನ ತನ್ನ ಮನೆಗೆ ಸಾಧ್ಯವಾದಷ್ಟು ಬೇಗ ಹೋಗಿ ಈ ಹುಚ್ಚು ಮನುಷ್ಯನಿಂದ ತಪ್ಪಿಸಿಕೊಳ್ಳಬೇಕೆಂದು ಅದು ತಿಳಿದಂತಿತ್ತು.

ಉಸಿರು ಬಿಡಲಾರದೆ ಓಡುವುದನ್ನು ನಿಲ್ಲಿಸಿದ್ದ ಮಿ.ಅಲಿಯನ್ನು ತೋಟದಲ್ಲಿ ಆಳುಗಳು ಹಿಡಿದರು, ಅವರಿಗೇನೂ ಆಗಿಲ್ಲ ಎಂದು ಅವರನ್ನು ನಂಬಿಸಲು ಅವರಿಗೆ ಸಾಕುಬೇಕಾಗಿತ್ತು. ಅವರೊಡನೆ ಸ್ನಾನದ ಮನೆಯಲ್ಲಿದ್ದುದು ಕೇವಲ

ಅಗಸರವನ ಕತ್ತೆ ಎಂದು ವಿವರಿಸುತ್ತಾ ಹೋದರು. ಅದು ಅಲ್ಲಿಗೆ ಬಂದದ್ದಾದರೂ ಹೇಗೆ ಎಂಬ ಯುಕ್ತ ಪ್ರಶ್ನೆಗೆ ಕೊನೆಗೂ ಉತ್ತರ ಸಿಗಲಿಲ್ಲ. ಎರಡೂ ಬಾಗಿಲುಗಳಿಗೂ ಚಿಲಕ ಹಾಕಿದ್ದರಿಂದ ಗೋಡೆಯ ಮುಖಾಂತರ ಬಂದಿರಬೇಕೆಂದು ಮಿ.ಅಲಿ ತಮ್ಮ ಸಿದ್ಧಾಂತವನ್ನು ಮಂಡಿಸಿದರು. ಸ್ನಾನದ ಮನೆಯಲ್ಲಿ ತಮ್ಮನ್ನು ಮುತ್ತಿಗೆ ಹಾಕಿದ್ದು ಕತ್ತೆಯ ರೂಪದಲ್ಲಿನ ಒಂದು ಕೆಟ್ಟ ಶಕ್ತಿ ಎಂದು ಅವರು ಖಚಿತ ಮಾಡಿಕೊಂಡಿದ್ದರು.

ಮನೆಯೊಳಗೆ ತಾಯಿ, ಮಕ್ಕಳೊಡನೆ ವಿಷಯಗಳನ್ನು ಚರ್ಚಿಸಿ ತಿಳಿದುಕೊಳ್ಳುತ್ತಿದ್ದರು. ಈ ಎಲ್ಲಾ ತುಂಟತನವನ್ನು ಯಾರು ಮಾಡಿದ್ದಾರೆ ಎಂಬುದನ್ನು ಬೇಗ ಅರ್ಥಮಾಡಿಕೊಂಡರು. ಈಗ ಅವಳ ತಾಳ್ಮೆ ತನ್ನ ಎಲ್ಲೆಯನ್ನು ಮುಟ್ಟಿತ್ತು. ಎಲ್ಲಿಯವರೆಗೆ ಮಿ.ಅಲಿ ತನ್ನ ಮೇಲೆ ದುಷ್ಟ ಶಕ್ತಿ ದಾಳಿ ಮಾಡಿತ್ತು ಎಂದು ಜ್ಞಾಪಕದಲ್ಲಿಟ್ಟಿರುವರೋ ಅಲ್ಲಿಯವರೆಗೆ ಟುನ್ನು ಕೂಡಾ ನೆನಪಿಟ್ಟುಕೊಳ್ಳುವಂತೆ ಅವಳ ಕಪಾಳಕ್ಕೊಂದು ಬಿಗಿದರು.

**ಚಿತ್ರಗಳು: ಮೊಹಮ್ಮದ್ ವಾಸಿಮ್**

ಫಿಲಿಪೈನ್ಸ್

# ಭಾಗ್ಯಶಾಲಿ ಹುಡುಗ

**ಎನ್.ವಿ.ಎಂ. ಗೊಂಜಾಲಿಸ್**

(ಸಂಪಾದಕರ ಟಿಪ್ಪಣಿ: ಫಿಲಿಪೈನ್ಸ್ ಜನಗಳು ವಿವಿಧ ಭಾಷೆಗಳನ್ನಾಡುತ್ತಾರೆ. ಅಂತಹ ಅನೇಕ ಪದಗಳು ಈ ಕಥೆಯಲ್ಲಿ ಸಿಗುತ್ತವೆ. ಕರಾಬೋ ಎಂದರೆ ಎಮ್ಮೆಯ ಪರ್ಯಾಯಪದ. ತತಾಯ್ ಎಂದರೆ ಫಿಲಿಪೈನ್ಸ್ ಭಾಷೆಯಲ್ಲಿ ತಂದೆ ಎಂದು, ಕಂಪಾದ್ರೆ ಅಂದರೆ ಸ್ಪಾನಿಷ್‌ನಲ್ಲಿ ಒಳ್ಳೆ ಸ್ನೇಹಿತ. ಕಥೆಯ ಮೊದಲ ಭಾಗವನ್ನು ಸಾಕಷ್ಟು ಸರಳಗೊಳಿಸಿದ್ದು ಫಿಲಿಪೈನ್ಸ್ ಜನರಲ್ಲದವರಿಗಾಗಿ ಅಲ್ಲಲ್ಲೇ ಕೆಲವು ವಿವರಣಾತ್ಮಕ ಪದ ಸಮುಚ್ಚಯಗಳನ್ನು ಸೇರಿಸಲಾಗಿದೆ).

ಅದೊಂದು ಹಿತಕರವಾದ ಜುಲೈ ರಾತ್ರಿ. ಜ್ಯೂಲಿಯೋ ಕಾಗದ ಬರೆಯುತ್ತಿದ್ದನು- ಎಲ್ಲರ ಬಗ್ಗೆ – ಅವನ ಮನೆ ಮಾಲಿಕ ಕಾ ಫೋನ್ಸೋಗೆ ಈ ಪತ್ರ ಬರೆಯುತ್ತಿದ್ದ. ಕಾ ಫೋನ್ಸೋ ವಾಸಮಾಡುತ್ತಿದ್ದ ಪಟ್ಟಣವಾದ ಮಾನಸಾಲಿಯ ಎಂಬ ಪಟ್ಟಣದಲ್ಲಿನ ಶಾಲೆಗೆ ಹೋಗಲು ಇಷ್ಟಪಡುತ್ತಿದ್ದ ತನ್ನ ಮಗ ಜೋಸ್ ಬಗ್ಗೆ ಈ ಪತ್ರ ಬರೆಯುತ್ತಿದ್ದ.

ಒಂದು ವರ್ಷದ ಕೆಳಗೆ ಅವರು ಮಿಂಡೋರೋ ಎಂಬ ದ್ವೀಪಕ್ಕೆ ಜಾಗ ಬದಲಾಯಿಸಿ ಬಂದಿದ್ದರು. ಏಕೆಂದರೆ ತನ್ನದೇ ಸ್ವಂತವಾದ ಭೂಮಿಯನ್ನು ಜೂಲಿಯೋಗೆ ಹೊಂದಲು ಆಗಿರಲಿಲ್ಲ. ಹಾಗೆಯೇ ಕಾ ಫೋನ್ಸೋ ಅವನನ್ನು ಹಿಡುವಳಿದಾರನನ್ನಾಗಿ ಮಾಡಿಕೊಳ್ಳಲು ಇಷ್ಟಪಟ್ಟಿದ್ದರಿಂದ ಅವನು ತನ್ನನ್ನು ತಾನೇ ಅದೃಷ್ಟವಂತನೆಂದುಕೊಂಡಿದ್ದನು.

'ಪ್ರಿಯ ಮಿತ್ರ' ಅವನು ಬರೆಯಲು ಪ್ರಾರಂಭಿಸಿದನು. ಕೆಲ ವರ್ಷಗಳ ಹಿಂದೆ, ಅವನ ಹೆಂಡತಿ ಮಗುವಿಗೆ ಜನ್ಮ ಕೊಟ್ಟಾಗ ಕಾ ಫೋನ್ಸೋ ನೆರೆ ಹೊರೆಯಲ್ಲಿದ್ದನು. ಆ ಮಗುವಿಗೆ ಸಾಕು ತಂದೆಯಾಗಲು ಮುಂದೆ ಬಂದಿದ್ದನು. ಅದಾದ ಮೇಲೆ ಅವರಿಬ್ಬರೂ ಒಳ್ಳೆಯ ಸ್ನೇಹಿತರಾದರು. ಜೂಲಿಯೋ ಫಿಲಿಫೈನ್ಸ್ ಭಾಷೆಯಾದ 'ಟ್ಯಾಗಾಲಾಗ್'ನಲ್ಲಿ, ತನ್ನ ಮಗನ ಶಾಲೆಯ ನೋಟ್ ಪುಸ್ತಕದಿಂದ ಹರಿದ ಒಂದು ಚೂರು ಕಾಗದದಲ್ಲಿ ಬರೆಯುತ್ತಿದ್ದನು.

ಕೈಯಲ್ಲಿ ಲೇಖಣಿ ಹಿಡಿದು ಅನೇಕ ತಿಂಗಳುಗಳಾಗಿದ್ದವು. ಮಾನಸಾಲಿಯ ಪಟ್ಟಣದಲ್ಲಿನ ಮುನಿಸಿಪಲ್ ಆಫೀಸಿಗೆ ಹೋದಾಗ ಮನೆಯ ಪರವಾಗಿ ಪತ್ರಕ್ಕೆ ಅರ್ಜಿಹಾಕಿದಾಗ ಲೇಖಣಿ ಹಿಡಿದಿದ್ದ, ಖಾಲಿ ಫಾರಂ ಅನ್ನು ಅಂದವಾಗಿ

ಭರ್ತಿಮಾಡಿದ್ದನ್ನು ನೋಡಿ ತಾನೇ ಆಶ್ಚರ್ಯಗೊಂಡಿದ್ದ. ಕಾ ಪೋನ್ಸ್ಲೋ, ತಾನು ಸಂಬಂಧಪಟ್ಟ ಅಧಿಕಾರಿಗಳೊಡನೆ ಮಾತನಾಡುವುದಾಗಿ ನಂಬಿಕೆ ಕೊಟ್ಟಿದ್ದಾಗ್ಯೂ, ಅರ್ಜಿಯಿಂದ ಏನೂ ಪ್ರಯೋಜನವಾಗಿರಲಿಲ್ಲ. ಈಗ ಪೆನ್‌ಗೆ ಬದಲಾಗಿ ಪೆನ್ಸಿಲನ್ನು ಉಪಯೋಗಿಸಿದರೆ, ಕಾ ಪೋನ್ಸ್ಲೋಗೆ ಅವನ ಪತ್ರ ಇನ್ನೂ ಸ್ಪಷ್ಟವಾಗಿರುತ್ತದೆಂದು ನಿಶ್ಚಯಿಸಿದ್ದನು.

'ನನ್ನ ಹುಡುಗ ಜೋಸ್ ಬಗ್ಗೆ ಬರೆಯುತ್ತಿದ್ದೇನೆ'. 'ಅವನು ಈಗ ಆರನೇ ತರಗತಿಯಲ್ಲಿದ್ದಾನೆ' ಮಿಂದೋಗೋಗೆ ಬಂದಿದ್ದರಿಂದ ಜೋಸ್ ಒಂದು ವರ್ಷ ಶಾಲೆಯನ್ನು ಕಳೆದುಕೊಳ್ಳಬೇಕಾಗುವುದೆಂದು. ಅದಕ್ಕೆ ಅವನನ್ನು ಸೇರಿಸಲಿಲ್ಲ. ನಿನ್ನ ಎಮ್ಮೆ ನೋಡಿಕೊಳ್ಳಲು ಅವನಿನ್ನೂ ಶಕ್ತನಲ್ಲ. ಆದ್ದರಿಂದ ನಾನು, ಪಟ್ಟಣದಲ್ಲಿ ಅವನು ಶಾಲೆಗೆ ಹೋದರೆ ಉತ್ತಮವೆಂದು ಯೋಚಿಸಿದೆ'.

ಗೋಡೆಯ ಮೇಲೆ ಹಿಂದಕ್ಕೆ ಒರಗಿಕೊಂಡನು. ಒಂದೇ ಕೋಣೆಯಲ್ಲಿ ವಾಸವಾಗಿದ್ದ ಆತ ನೆಲದ ಮೇಲೆ ಕುಳಿತುಕೊಂಡು ಬರೆಯುತ್ತಿದ್ದನು. ಬೆಂಚು ಒಂದು ಮೂಲೆಯಲ್ಲಿತ್ತು. ಅತ್ತ ಒಲೆ ಇತ್ತು. ಬಲಗಡೆ ಅವನ ಹೆಂಡತಿ ಮತ್ತು ಅವನ ಹೆಣ್ಣುಮಗು ಸೆಣಬಿನ ಸೊಳ್ಳೆಪರದೆಯ ಕೆಳಗೆ ಮಲಗಿದ್ದರು. ಜೋಸ್ ಕೂಡಾ ಬಾಗಿಲ ಬಳಿ ಇರುವ ಹೊಟ್ಟು ತೆಗೆಯದ ಅಕ್ಕಿ ಮೂಟೆಯ ಬಳಿ ಒಡ್ಡೊಡ್ಡಾಗಿ ಕಾಲು ಚಾಚಿಕೊಂಡು ಮಲಗಿದ್ದನು. ಅವನು ಇಡೀ ಮಧ್ಯಾಹ್ನ ನದಿಯ ಆಚೆ ದಡದಲ್ಲಿದ್ದ ಹೊಸದಾಗಿ ನಾಟಿ ಮಾಡಿದ ಭತ್ತದ ಸಾಗುವಳಿಗಾಗಿ ಸಿದ್ಧಗೊಳಿಸಿದ್ದ ಜಮೀನಿನತ್ತ ಹೋಗಿದ್ದ. ಕಾ ಪೋನ್ಸ್ಲೋನ ಎಮ್ಮೆಗಳನ್ನು ಹುಡುಕುವುದರಲ್ಲಿ ಹೊರಗಡೆಯೇ ಇದ್ದನು. ಜೋಸ್ ಆಯಾಸಗೊಂಡ ಯುವಕನಂತೆ ಮೆಲ್ಲನೆ ಗೊರಕೆ ಹೊಡೆಯುತ್ತಿದ್ದನು. ಅವನಿಗೆ ಹನ್ನೆರಡು ವರ್ಷ ವಯಸ್ಸು.

ಸೀಮೆಯೆಣ್ಣೆ ದೀಪದ ಹಳದಿ ಜ್ವಾಲೆಯು ಮಿನುಗುಟ್ಟುತ್ತಿತ್ತು. ಅಡಿಗೆ ವಾಸನೆ ಬರುತ್ತಿತ್ತು. ಮೀನಿನ ಸಾರು ಬೆಂಚಿನ ಮೇಲೆ ಒಣಗಿದ್ದುದರಿಂದ ಅದು ಮರದ ರಚನೆಯಂತೇ ಕಾಣಿಸುತ್ತಿತ್ತು. ಜೂಲಿಯೋನ ಸ್ವಭಾವ ಭಾವುಕವಲ್ಲದ್ದು. ಅವರ ಬಡತನ ಅವನಿಗೆ ನೋವುಂಟು ಮಾಡುತ್ತಿತ್ತು. ವಾಸನೆ ಮೂಗಿನ ಹೊಳ್ಳೆಗಳಿಗೆ ಬಡಿಯುತ್ತಿದ್ದರೂ ಅವನು ಸಹಜವಾಗೇ ಇದ್ದ. ಕ್ಷಣಕಾಲ ಸೊಳ್ಳೆಪರದೆ ಕಡೆ ನೋಡಿದ. ಬಳಿಕ ಬಾಗಿಲ ಬಳಿ ಮಲಗಿದ್ದ ಜೋಸ್ ಕಡೆ ನೋಡಿದ. ತನ್ನ ಕಾಗದವನ್ನು ಮುಂದುವರಿಸಿದ.

'ಜೋಸ್ ಚುರುಕಾದ ಹುಡುಗ, ಅವನು ನಿನ್ನ ಮನೆಯಲ್ಲಿರಲು ಅವಕಾಶಮಾಡಿಕೊಟ್ಟರೆ, ನಿನಗೆ ಇಷ್ಟಬಂದಂತೆ ಅವನಿಂದ ಏನು ಕೆಲಸವನ್ನಾದರೂ ಮಾಡಿಸಿಕೊಳ್ಳಬಹುದು. ಅನ್ನವನ್ನು ಮಾಡಬಲ್ಲ, ಪಾತ್ರೆಗಳನ್ನು ಚೆನ್ನಾಗಿ ತೊಳೆಯಬಲ್ಲ'.

ಉತ್ಸವದ ಕಾಲದಲ್ಲಿ, ಮೂರು ತಿಂಗಳುಗಳ ಹಿಂದೆ, ಅಲ್ಲಿಗೆ ತಾನು ಕೊಟ್ಟ

ಒಂದಿನ ಭೇಟಿಯನ್ನು ಜ್ಯೂಲಿಯೋ ಜ್ಞಾಪಿಸಿಕೊಂಡನು. ಅನೇಕ ಆಳುಗಳಿರುವ ಒಂದು ದೊಡ್ಡ ಮನೆ, ಸ್ವಂತ ಪ್ರತಿಬಿಂಬವನ್ನು ನೋಡಿಕೊಳ್ಳಬಹುದಾದಷ್ಟು ಚೆನ್ನಾಗಿ ನೆಲ ಹೊಳೆಯುತ್ತಿತ್ತು. ನೆಲದ ಮೇಲೆ ಹೆಜ್ಜೆ ಗುರುತುಗಳನ್ನು ಒರೆಸಲು ಒಬ್ಬ ಆಳು ಯಾವಾಗಲೂ ಒಂದು ಹಳೆಯ ಬಟ್ಟೆಯೊಡನೆ ಹಿಂಬಾಲಿಸುತ್ತಿದ್ದನು.

'ನೀನಿದನ್ನು ದೊಡ್ಡ ಕಷ್ಟವೆಂದು ಯೋಚಿಸುವುದಿಲ್ಲವೆಂದು ಭಾವಿಸುತ್ತೇನೆ' ಜ್ಯೂಲಿಯೋ ತನ್ನ ವಿಚಾರಗಳನ್ನು ತುಂಬಾ ಉತ್ತಮವಾದ ವಾಕ್ಯಗಳಲ್ಲಿ ಜೋಡಿಸಲು ತನ್ನ ಪ್ರಯತ್ನ ಮುಂದುವರಿಸಿದನು. ಫೋನ್ಸೋ ತನ್ನ ಕಾಗದವನ್ನು ಸರಿಯಾದ ರೀತಿಯಲ್ಲಿ ಗ್ರಹಿಸದೆ ಇರಬಹುದೆಂಬ ಅಸ್ಪಷ್ಟ ಹೆದರಿಕೆ ಅವನಿಗೆ ಇತ್ತು. ಆಗಾಗ್ಗೆ ತಾನು ಏನು ಬರೆದೆನೆಂದು ಇನ್ನೊಮ್ಮೆ ಓದುವುದಕ್ಕಾಗಿ ಮಾತ್ರ ನಿಲ್ಲಿಸುತ್ತಿದ್ದನು. ನೀನು ನಮಗೆ ಮಾಡಿದ ಸಹಾಯಕ್ಕೆ ನಾವು ಪ್ರತ್ಯುಪಕಾರ ಮಾಡುವೆವು. ಈಗಾಗಲೇ ನಾವು ನಿನಗೆ ಋಣಿಯಾದ್ದೇವೆ ಎಂಬುದು ನಿಜ, ಆದರೆ ನನ್ನ ಹೆಂಡತಿ ಮತ್ತು ನಾನು ನಿಜವಾಗಿಯೂ ನಿನ್ನ ಋಣವನ್ನು ತೀರಿಸುವೆವು'.

ಕೊನೆಯ ವಾಕ್ಯವನ್ನು ಪುನಃ ಓದುತ್ತಾ, ತನ್ನ ಹೆಂಡತಿಯ ಬಗ್ಗೆ ಉಲ್ಲೇಖಿಸಿರುವುದನ್ನು ಖಚಿತಮಾಡಿಕೊಂಡು, ಜ್ಯೂಲಿಯೋ ಇಲ್ಲಿಗೆ ಬಂದ ಮೇಲೆ ಮೊದಲ ತಿಂಗಳಲ್ಲಿ ಡಾ ಫೋನ್ಸೋನಿಂದ ಪಡೆದ ಐದು ದೊಡ್ಡ ಅಕ್ಕಿಯ ಚೀಲಗಳ ಬಗ್ಗೆ ಜ್ಞಾಪಿಸಿಕೊಂಡನು. ಸುಗ್ಗಿಯ ಸಮಯದಲ್ಲಿ ಆ ಅಕ್ಕಿಯ ಎರಡಷ್ಟನ್ನು ಒಂದಕ್ಕೆ ವಾಪಸು ಮಾಡುವಂತೆ ಅವನು ಹೇಳಿದ್ದ. ಈ ಪದ್ಧತಿ ಅಲ್ಲಿ ಮಾಮೂಲಾಗಿತ್ತು. ಜ್ಯೂಲಿಯೋ ದೂರುವಂಥವನಾಗಿರಲಿಲ್ಲ. ಜೊತೆಗೆ, ಅವನು ಡಾ ಫೋನ್ಸೋವನ್ನು ತನ್ನ ಆಧ್ಯಾತ್ಮಿಕ ಸ್ನೇಹಿತನೆಂದು ಭಾವಿಸಿದ್ದ. ನಿಜಕ್ಕೂ ಅವನು ಒಳ್ಳೆಯ ಸ್ನೇಹಿತನಾಗಿದ್ದನು.

ಅಲ್ಲಿಯ ಅನೇಕ ವಿಷಯಗಳ ಬಗ್ಗೆ ಅಭ್ಯಾಸವಿಲ್ಲದಿರುವುದರಿಂದ, ಡಾ ಫೋನ್ಸೋ ಮನೆಯಲ್ಲಿ ಜೋಸ್ ಹೇಗೆ ನಡೆದುಕೊಳ್ಳುವನೋ ಎಂದು, ವ್ಯಾಕುಲನಾದ. ಹುಡುಗ ಕುರ್ಚಿಯ ಮೇಲೆ ಎಡವಿ ಬೀಳಬಹುದು. ಕೆಲವು ತಟ್ಟೆಗಳನ್ನು ಒಡೆಯಬಹುದು............ ಮೇಲೆ ಮೇಲೆ ಹುಡುಗನ ಬಗ್ಗೆ ಯೋಚನೆಗಳು ಕಾಡಲಾರಂಭಿಸಿದವು.

'ಜೋಸ್‌ನನ್ನು ನೀನು ನಿನ್ನ ಮಗನಂತೆ ನೋಡಿಕೊಳ್ಳಬೇಕೆಂದು ಇಷ್ಟಪಡುತ್ತೇನೆ; ಮಿತ್ರ, ಅವನೇನಾದರೂ ತಪ್ಪು ಮಾಡಿದರೆ, ನೀನು ಶಿಕ್ಷಿಸಬಹುದು. ನಿಜವಾಗಿಯೂ ನೀನು ಅವನಿಗೆ ಎರಡನೆಯ ತಂದೆಯಂತಿರಬೇಕೆಂದು ಇಷ್ಟಪಡುವೆನು'.

ಇನ್ನು ಹೆಚ್ಚಿಗೆ ಬರೆಯುವುದೇನೂ ಇಲ್ಲವೆಂದು ಜ್ಯೂಲಿಯೋ ಭಾವಿಸಿದನು. ತನ್ನ ಜೀವನದಲ್ಲೇ ಬಹಳ ದೀರ್ಘವಾದ ಕಾಗದವನ್ನು ಬರೆದಿದ್ದನು. ಕ್ಷಣಕಾಲ ಅವನ ಬಲಗೈನ ಬೆರಳುಗಳು ಜೋಮು ಹಿಡಿದಂತಾದುವು. ಇದು ನಿಜವಾಗಿಯೂ

ವಿಚಿತ್ರವಾದ ವಿಷಯವಾಗಿತ್ತು. ಏಕೆಂದರೆ, ಅವನು ಪತ್ರವನ್ನು ಅಪೂರ್ಣವಾಗಿ ಮುಗಿಸಿದ್ದನು. ಹಿಂದಕ್ಕೆ ಒರಗಿಕೊಂಡು ತನಗೆ ತಾನೇ ನಕ್ಕನು.

ಕಾಗದವನ್ನು ಮುಗಿಸಿದ್ದನು. ತನಗೆ ಎಂದಿಗೂ ಬರೆಯಲಾಗುವುದಿಲ್ಲವೆಂದು ಹೆದರಿದ್ದನು. ಆದರೆ ಈಗ ಅದನ್ನು ಸಾಧಿಸಿದ್ದ. ಅಲ್ಲದೆ ಕಾಗದ ಚೆನ್ನಾಗಿ ಓದಿಸಿಕೊಳ್ಳುತ್ತದೆ ಎಂದು ಕಾಣಿಸಿತು. ಇದನ್ನು ಜೋಸ್ ಜೊತೆ ಕಳುಹಿಸಬೇಕು ಎಂದುಕೊಂಡ.

ಮಾರನೇ ದಿನ ಬೆಳಗ್ಗೆ ಸುಮಾರು ಆರು ಗಂಟೆಗೆ ಹನ್ನೆರಡು ವರ್ಷದ ಹುಡುಗನೊಬ್ಬ ಪಕ್ಕದ ರಸ್ತೆಯ ಮುಖಾಂತರ ಪಟ್ಟಣಕ್ಕೆ ಎಮ್ಮೆ ಸವಾರಿ ಮಾಡುತ್ತಾ ಹೊರಟಿದ್ದನು. ಅದರ ಅಗಲವಾದ ಬೆನ್ನಿನ ಮೇಲೆ ಕುಳಿತ ಪುಟಾಣಿ ಬಾಲಕನಂತೆ ಕಾಣುತ್ತಿದ್ದ. ಎಮ್ಮೆಯ ಹಿಂದುಗಡೆ ನಡೆಯುತ್ತಾ ತಂದೆ ನದಿಯ ತಿರುವಿನ ವರೆಗೆ ಅವನ ಜೊತೆಗೆ ಹೋದರು. ಚಿಕ್ಕ ನದಿಯನ್ನು ದಾಟಲು ಹಿಂದೆ ಮುಂದೆ ನೋಡಿದಾಗ, ಬಿದಿರು ಮೆಳೆಯಿಂದ ಒಂದು ಕಡ್ಡಿಯನ್ನು ತೆಗೆದುಕೊಂಡು ಆ ಪ್ರಾಣಿಯನ್ನು ಚುಚ್ಚಿದನು. ಹುಡುಗನಿಗೆ ಬೆಲೆಬಾಳುವ ಬಹುಮಾನ ಕೊಡುವಂತೆ, ಆ ಕಡ್ಡಿಯನ್ನು ಹುಡುಗನ ಕೈಯ್ಯಲ್ಲಿಟ್ಟನು.

ತಂದೆ ಹೊಳೆಯನ್ನು ದಾಟಲಿಲ್ಲ, ಆಚೆ ದಡದ ಮೇಲೆ ಅಲ್ಲೇ ನಿಂತುಕೊಂಡನು. 'ಕಾಗದವನ್ನು ಎಚ್ಚರಿಕೆಯಿಂದ ತೆಗೆದುಕೊಂಡು ಹೋಗು', ಅವನು ನಿಂತಲ್ಲಿಂದಲೇ ಕೂಗಿದನು.'ನಿನ್ನ ಅಂಗಿಯ ಜೇಬಿನಲ್ಲಿ ಇದೇ ತಾನೇ?'.

ಆ ಹುಡುಗ ಜೇಬನ್ನು ತಡಕಾಡಿ ಕಾಗದವನ್ನು ನೋಡಿದ ಮೇಲೆ, ಕೂಗಿ ಹೇಳಿದನು;'ಇಲ್ಲ ಅಪ್ಪಾ, ನಾನು ಕಳೆಯುವುದಿಲ್ಲ'.

'ಎಮ್ಮೆಯನ್ನು ಚೆನ್ನಾಗಿ ಎಚ್ಚರಿಕೆಯಿಂದ ನೋಡಿಕೋ' ಜ್ಯೂಲಿಯೋ ಹೇಳಿದ.'ಅದನ್ನು ವಾಪಸು ತರಲು ನಾನೇ ಇನ್ನೊಂದೆರಡು ದಿನಗಳಲ್ಲಿ ಪಟ್ಟಣಕ್ಕೆ ಬರುವೆನು. ಮೊದಲು ಗಿಡ ನೆಡುವುದನ್ನು ಮುಗಿಸಿ ಬರುತ್ತೇನೆ'.

ಜ್ಯೂಲಿಯೋ ಹೊಲದಲ್ಲಿ ತನಗಾಗಿ ಕಾದಿದ್ದ ಕೆಲಸವನ್ನು ಯೋಚಿಸುತ್ತಾ, ಹಿಂದಿರುಗಿದ. ಮಗನಿಗೆ ಏನೋ ಹೇಳಬೇಕೆಂದು ಜ್ಞಾಪಿಸಿಕೊಂಡನು. ನಿಂತುಕೊಂಡು, ಅವನನ್ನು ಮತ್ತೆ ಕರೆದನು.'ಆ ಕಾಗದವನ್ನು ನೀನು ಪಟ್ಟಣಕ್ಕೆ ಹೋದೊಡನೆಯೇ ಕಾ ಫೋನ್ಸೋಗೆ ಕೊಡು. ಮರೆಯಬೇಡ. ಒಳ್ಳೆಯವನಾಗಿರು. ಅವನು ಹೇಳಿದ ಕೆಲಸವನ್ನೆಲ್ಲಾ ಮಾಡು, ಎಲ್ಲವನ್ನೂ ಜ್ಞಾಪಕ ಇಟ್ಟುಕೋ'.

ಜೋಸ್ ಉತ್ತರಿಸಿದ, 'ಸರಿ ಅಪ್ಪಾ, ಆಗಲಿ'. ಅವನ ಬೆನ್ನಿಗೆ ಒಂದು ಸಣ್ಣ ಬಟ್ಟೆಯ ಗಂಟು ಮತ್ತು ಒಂದು ಬುತ್ತಿಯನ್ನು ಕಟ್ಟಲಾಗಿತ್ತು. ಮೊದಲನೆಯ ವಾರಕ್ಕೆ ಆಹಾರವಿತ್ತು. ಇದು ಹಳ್ಳಿ ಅಥವಾ ತೋಟದಿಂದ ಬರುವ ಶಾಲೆಯ ಹುಡುಗರ ಪದ್ಧತಿಯಾಗಿತ್ತು. ಜೋಸ್‌ನ ವಿಚಾರದಲ್ಲಿ, ಅವನು ಕಾ ಫೋನ್ಸೋವಿನ ಮನೆಗೆ ಹೋಗುತ್ತಿದ್ದಾಗಲೂ ಕೂಡಾ, ಅವನು ತನ್ನ ಮೊದಲನೇ ವಾರದ

ಆಹಾರ ತರುವುದನ್ನು ಮರೆತಿದ್ದಾನೆ ಎಂಬ ಚಿಕ್ಕ ವಿಷಯವನ್ನು ಮರೆತುಬಿಟ್ಟಿದ್ದಾನೆ ಎಂಬುದಾಗಿ ಹೇಳಿಕೊಳ್ಳಲು ಜ್ಯೂಲಿಯೋಗೆ ಇಷ್ಟವಿರಲಿಲ್ಲ. ಎತ್ತರವಾಗಿ ನಿಂತಿದ್ದ ಸೆಣಬಿನ ಗಿಡಗಳು ಹಾಗೂ ಬೆಳಗ್ಗಿನ ಸೂರ್ಯನ ಕಿರಣಗಳಿಂದ ಥಳಥಳಿಸುತ್ತಿದ್ದ ಹಸಿರು ಎಲೆಗಳ ಮಧ್ಯೆ ಆ ಹುಡುಗ ಈಗ ತಂದೆಯ ದೃಷ್ಟಿಯಿಂದ ದೂರವಾಗಿದ್ದನು. ತಂದೆಯ ಬಗ್ಗೆ ಯೋಚಿಸುತ್ತಾ, ಜೋಸ್ ಕೂಡಲೇ ತನ್ನ ಜೇಬಿನಲ್ಲಿದ್ದ ಆ ಕಾಗದದ ಬಗ್ಗೆ ಕುತೂಹಲಗೊಂಡನು. ಅವನು ಎಮ್ಮೆಯನ್ನು ರಸ್ತೆ ಪಕ್ಕದ ಒಂದು ಮರದ ನೆರಳಿನಲ್ಲಿ ನಿಲ್ಲಿಸಿದನು. ಜೋಸ್ ಕಾಗದ ಓದುತ್ತಿದ್ದಾಗ ಹತ್ತಿರದ ಒಂದು ಪೊದೆಯಲ್ಲಿ ಪಕ್ಷಿ ಹಾಡುತ್ತಿತ್ತು.

ಪದದಿಂದ ಪದಕ್ಕೆ ಕಣ್ಣಾಡಿಸುತ್ತಾ, ತನ್ನ ತಂದೆಯ ಭಾಷೆಯನ್ನು ಅರ್ಥಮಾಡಿಕೊಳ್ಳುವುದು ಅವನಿಗೆ ಕಷ್ಟವೆನಿಸಿತಾದರೂ ಓದುತ್ತಾ ಓದುತ್ತಾ ಒಂದೊಂದು ಪದದ ಅರ್ಥವನ್ನು ಅವನು ಅರ್ಥಮಾಡಿಕೊಂಡು, ಬಹಳ ಹಿಗ್ಗಿದ. ತಾನು ಪ್ರಪಂಚದಲ್ಲೇ ಅತ್ಯಂತ ಭಾಗ್ಯವಂತ ಹುಡುಗನೆಂದು ಯೋಚಿಸತೊಡಗಿದ. ಪಕ್ಷಿಗಳೂ ಇದನ್ನೇ ಹಾಡುತ್ತಾ ಹೇಳುತ್ತಿರುವಂತೆ ಅನ್ನಿಸಿತು. ದೂರದಲ್ಲಿ ತಾನು ಮತ್ತು ತನ್ನ ತಂದೆ ಅಗಲಿದ ಅಚೆ ಹೊಳೆಯ ಕಲರವವನ್ನು ಕೇಳಿದನು. ಇಡೀ ಜಗತ್ತು ಪಕ್ಷಿಯ ಹಾಡುಗಳಿಂದ ಮತ್ತು ಹೊಳೆಯ ಸಂಗೀತದಿಂದ ತುಂಬಿ ತುಳುಕಿದಂತೆ ಕಾಣಿಸಿತು.

ಚಿತ್ರಗಳು: ಎಡ್ಗರ್ ಸೊಲ್ಲರ್

ಸಿಂಗಪುರ್

# ಮರೆಯಲಾಗದ ಬೆಕ್ಕು

## ವೈಲೆಟ್ ವಿಲ್‌ಕಿನ್ಸ್

*(ಸಂಪಾದಕರ ಟಿಪ್ಪಣಿ: ಕೆಲವು ಉಪಕಥೆಗಳನ್ನು ಬಿಟ್ಟು ಈ ಕಥೆಯನ್ನು ಸಂಕ್ಷಿಪ್ತಗೊಳಿಸಲಾಗಿದೆ.)*

'ಮಿಯೊಂ,ಮಿಯೊಂ' ಯೂಸಫ್ ಹೋಗುತ್ತಿದ್ದಾಗ ರಸ್ತೆಯ ಪಕ್ಕದಲ್ಲಿ ಒಂದು ಕ್ಷೀಣ ಸ್ವರ ಚರಂಡಿಯ ಕಡೆಯಿಂದ ಬಂತು. ಅವನು ನಿಂತುಕೊಂಡು ಆಲಿಸಿದನು. ಕೂಗು ಮತ್ತೆ ಬಂತು; 'ಮಿಯೊಂ, ಮಿಯೊಂ'.

ಯೂಸಫ್ ಚರಂಡಿಯತ್ತ ನೋಡಿದನು. ಒಂದು ಬೆಕ್ಕಿನ ಮರಿ, ತೆಳ್ಳಗೆ, ಕೊಳೆಯಿಂದ ಬೂದು ಬಣ್ಣವಾಗಿ ತುಂಬಾ ಒದ್ದೆಯಾಗಿತ್ತು, ಅದು ಅವನ ಕಡೆ ದಯನೀಯವಾಗಿ ನೋಡಿತು. ಯೂಸಫ್ ಆಳವಾದ ಚರಂಡಿಯಲ್ಲಿ ಕೈಹಾಕಿ ಅದನ್ನು ಮೇಲಕ್ಕೆ ಎತ್ತಿಕೊಂಡನು–ಚರಂಡಿಯ ಅರ್ಧ ಮುಚ್ಚಿದ್ದ ಹಲಗೆಯ ಮೇಲೆ ಇಟ್ಟನು. ಅದು ಅಲ್ಲಿ ಹಾಗೇ ನಿಂತುಕೊಂಡಾಗ ಅನಾಥವಾದಂತೆ ಕಂಡಿತು.



'ಬಡಪಾಯಿ ಬೆಕ್ಕು' ಎನ್ನುತ್ತಾ ಯೂಸಫ್ 'ಬಾ, ನಿನ್ನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗುತ್ತೇನೆ'.

ಯೂಸಫ್ ತಾಯಿಗೆ ಬೆಕ್ಕಿನ ಮರಿ ಬಗ್ಗೆ ಆಸಕ್ತಿಯಿರಲಿಲ್ಲ.'ಯೂಸಫ್ ನಿನಗೆ ಗೊತ್ತಿದೆ, ನಾವು ಫ್ಲಾಟಿಗೆ ಅರ್ಜಿ ಹಾಕಿದ್ದೇವೆ. ಅಲ್ಲಿಯ ನಿಯಮಗಳು ಸಾಕುಪ್ರಾಣಿಗಳನ್ನು ಇಟ್ಟುಕೊಳ್ಳಲು ನಿಷೇಧಿಸುತ್ತವೆ ಎಂಬುದೂ ನಿನಗೆ ಗೊತ್ತಿದೆ. ಬೆಕ್ಕುಗಳನ್ನು ನಮ್ಮೊಡನೆ ತೆಗೆದುಕೊಂಡು ಹೋಗಲು ಆಗುವುದಿಲ್ಲ. ನಾವು ಹೋಗಬೇಕಾದಾಗ ಈ ಬಗ್ಗೆ ಯೋಚಿಸಬೇಕಾಗಿದೆ. ಸುಲಭವಲ್ಲ ಇದು, ಈಗಲೇ ಹೇಳುತ್ತಿದ್ದೇನೆ ನೋಡು'.

ಬೆಕ್ಕಿನ ಮರಿಯನ್ನು ಇಟ್ಟುಕೊಳ್ಳುವಂತೆ ಯೂಸಫ್ ತುಂಬಾ ಬೇಡಿಕೊಂಡನು. ಕೊನೆಗೆ ತಾಯಿ 'ಆದರೆ ಒಂದೆರಡು ದಿನ ಮಾತ್ರ ಇರಲಿ ತಿಳಿಯಿತಾ?' ಎಂದು ಹೇಳಿ ಒಪ್ಪಿಕೊಂಡಳು.

ಸಮಯ ಬಂದಾಗ ತಾನೇ ನೆಲೆಯಿಲ್ಲದ ಪ್ರಾಣಿಗಳಿಗೆ ಒಂದು ಮನೆಯನ್ನು ಪತ್ತೆಹಚ್ಚುವೆನೆಂದು ಯೂಸಫ್ ಮಾತುಕೊಟ್ಟನು. ಅದಕ್ಕೆ ಆಹಾರ ಹಾಕಿದನು, ಸ್ವಚ್ಛಗೊಳಿಸಿದನು. ಅದಕ್ಕೆ ಪೂಸಿ ಎಂದು ಹೆಸರಿಟ್ಟ. ಅದು ಮಂಜಿನಂತೆ ಬೆಳ್ಳಗಾಗಿದ್ದನ್ನು ನೋಡಿ, ಅವರೆಲ್ಲಾ ತುಂಬಾ ಆಶ್ಚರ್ಯಗೊಂಡರು. ಅದರ ಕಣ್ಣುಗಳು ಸುಂದರವಾದ ನೀಲಿ ಬಣ್ಣಕ್ಕಿದ್ದುವು.

ತಿಂಗಳುಗಳು ಕಳೆದ ಮೇಲೆ, ಯೂಸಫ್‌ಗೆ ಪೂಸಿ ಬಗ್ಗೆ ಹೆಚ್ಚು ಹೆಚ್ಚು ಪ್ರೀತಿ ಬೆಳೆಯಿತು. ಫ್ಲಾಟ್ ಬದಲಾಯಿಸುವ ಯೋಚನೆ ಅವನ ಮನಸ್ಸಿನಿಂದ ಹೊರಟು ಹೋಯಿತು. ಬಹುಶಃ ಅವರಿಗೆ ಫ್ಲಾಟ್ ಸಿಗುವ ಲಕ್ಷಣಗಳಿರಲಿಲ್ಲ. ಸಾಕುಪ್ರಾಣಿಯನ್ನು ಇಟ್ಟುಕೊಳ್ಳಲು ಅವನಿಗೆ ತೊಂದರೆಯಿರಲಿಲ್ಲ.

ಉದ್ದವಾದ ರೇಷ್ಮೆಯಂತಹ ಕೂದಲು, ಸೊಗಸಾದ ನೆಟ್ಟನೆಯ ಪೊದೆಯಂತಹ ಬಾಲವುಳ್ಳ ಪೂಸಿ ಸುಂದರವಾಗಿ ಬೆಳೆಯಿತು. ಚಿಕ್ಕ ಕೂದಲುಗಳು ಮತ್ತು ತಿರುಚು ಬಾಲದಿಂದ ಕೂಡಿ ಇತರ ಬೆಕ್ಕುಗಳಿಗಿಂತ ಭಿನ್ನವಾಗಿತ್ತು. ಯೂಸಫ್ ಹೆಚ್ಚಾಗಿ ಪೂಸಿಯನ್ನು ಪ್ರೀತಿಸುತ್ತಿದ್ದನು.

ಪೂಸಿ ತಾಯಿಯಾಗುವುದರಲ್ಲಿದೆ ಎಂಬುದು ಮನೆಯವರಿಗೆ ತಿಳಿದಾಗ ಅವರು ತುಂಬಾ ಸಂತಸಗೊಂಡರು. ಆಗಾಗ್ಗೆ ಪೂಸಿ ಹಾಗೂ ಅದು ಮುಂದೆ ಪಡೆಯುವ ಮರಿಗಳ ಬಗ್ಗೆ ಮಾತನಾಡುತ್ತಿದ್ದರು.

ಒಂದು ದಿನ ಯೂಸಫ್ ಶಾಲೆಯಿಂದ ಬಂದಾಗ ಅವರಿಗೆ ಕೂಡಲೇ ಒಂದು ಫ್ಲಾಟನ್ನು ಕೊಡಲಾಗುವುದು ಎಂದು ತಿಳಿದು, ಯೂಸಫ್‌ಗೆ ಪೂರಾ ಗಾಬರಿಯಾಗಿತ್ತು. ಪೂಸಿಗೆ ಏನು ಗತಿ? ಅದರ ಮರಿಗಳ ಪಾಡೇನು?

ಅವನ ತಂದೆ ತಾಯಿಗಳು ಕಟ್ಟುನಿಟ್ಟಾಗಿ ಹೇಳಿದರು. ಪೂಸಿಯನ್ನು ಖಂಡಿತ ಅಗಲಬೇಕಾಗಿತ್ತು. ಅದನ್ನು ಸಾಕುಪ್ರಾಣಿಗಳನ್ನು ನೋಡಿಕೊಳ್ಳುವ ಸಂಸ್ಥೆಗೆ

ಕರೆದುಕೊಂಡು ಹೋಗಬೇಕಾಗುವುದು. ಅದಕ್ಕೆ ಹುಟ್ಟುವ ಮರಿಗಳಿಗೆ ಮನೆ ಸಿಗುವುದು.

ಯೂಸಫ್ ಎಲ್ಲವನ್ನೂ ಕೇಳಿಸಿಕೊಂಡರೂ ಒಂದು ಮಾತನ್ನೂ ಹೇಳಲಿಲ್ಲ. ಅವನಿಗೆ ಅಳುವಂತಾಯಿತು. ಪೂಸಿಯನ್ನು ಅವನಿಂದ ದೂರ ಕರೆದುಕೊಂಡು ಹೋಗಬಾರದೆಂದು ಕಿರುಚಬೇಕೆಂದೆನಿಸಿತು.

ಅವನು ರಾತ್ರಿಯೆಲ್ಲಾ ಹಾಸಿಗೆಯಲ್ಲಿ ಹೊರಳಾಡುತ್ತಾ ಮಗ್ಗಲು ಬದಲಿಸುತ್ತಾ ಇದ್ದನು. ಕೊನೆಗೆ ಮಲಗಿ ನಿದ್ರೆ ಹೋದ ಮೇಲೆ ಪೂಸಿ ಒಂದು ಪಂಜರದಲ್ಲಿ ಹೊರಗೆ ಬರಲು ಮಿಯೊಂ ಎಂದು ಕೂಗುತ್ತಿದ್ದಂತೆ ಕನಸು ಕಂಡನು. ಅದು ದುಃಖದಿಂದ ಕೂಗಿದಾದ, ಅವನು ಅದರ ಮೇಲೆ ತನ್ನ ಕೈಯನ್ನು ಹಾಕಿ, ಮುದ್ದಿಸಲು ಹೋದಾಗ ಅವನ ಕೈಗೆ ಮೆತ್ತಗೆ ಏನೋ ಸಿಕ್ಕಿತು......ತಕ್ಷಣ ಎದ್ದನು. ಪೂಸಿ ಅವನ ಜೊತೆಗೆ ಹಾಸಿಗೆಯಲ್ಲಿ, ಮೆಲ್ಲನೆ ಮಿಯೊಂ ಎನ್ನುತ್ತಿತ್ತು. ಅದಕ್ಕೆ ತಾವು ಹೊರಟು ಹೋಗುತ್ತಿರುವುದು ತಿಳಿದಿದೆ ಮತ್ತು ಅದು ತನ್ನ ಜೊತೆಯೇ ಇರಬೇಕೆಂದು ಹೇಳಲು ಪ್ರಯತ್ನಿಸುತ್ತಿದೆ ಎಂಬಂತೆ ಯೂಸಫ್ ಯೋಚಿಸಿದನು.

ಹಿಂದೆ ಎಂದೂ ಪೂಸಿ ಅವನ ಹಾಸಿಗೆಗೆ ಬಂದಿರಲಿಲ್ಲ. ತಾನು ಸುತ್ತಲೂ ತಿರುಗಾಡದೆ ಇರುವಾಗ ಅದು ಯಾವಾಗಲೂ ಸಲಕರಣೆಗಳನ್ನಿಡುವ ಪೆಡ್‌ನಲ್ಲಿ ಹುಲ್ಲಿನ ಹಾಸಿಗೆಯ ಮೇಲೆ ಇರುತ್ತಿತ್ತು. ತಾಯಿಗೆ ಗೊತ್ತಾದರೆ ಅವಳು ಕೋಪಿಸಿಕೊಳ್ಳುವಳು. ಏಕೆಂದರೆ, ಅವಳಿಗೆ ಬೆಕ್ಕುಗಳು ಹಾಸಿಗೆಗಳ ಮೇಲೆ ಮಲಗುವುದು ಇಷ್ಟವಿರಲಿಲ್ಲ.

ಬೇರೆಯ ಕೊಠಡಿಗಳಿಂದ ಗೊರಕೆಗಳು ಬರುತ್ತಿದ್ದುವು. ನಿಶ್ಶಬ್ದವಾಗಿ ಯೂಸಫ್ ಹಾಸಿಗೆಯಿಂದ ಹೊರಗೆ ಬಂದನು. ಪೂಸಿಯನ್ನು ಎತ್ತಿಕೊಂಡು ಮುಂದಿನ ಬಾಗಿಲಿಗೆ ತುದಿಗಾಲಲ್ಲಿ ಹೋದನು. ಮೆಲ್ಲಗೆ ಶಬ್ದ ಮಾಡದಂತೆ ಬಾಗಿಲನ್ನು ತೆಗೆದನು. 'ನೀನು ಒಳ್ಳೆಯವಳು, ಪೂಸಿ, ನಿನ್ನ ಹಾಸಿಗೆಗೆ ಹೋಗು:, ಪಿಸುಗುಟ್ಟುತ್ತಾ ಪೂಸಿಯನ್ನು ಹೊರಕ್ಕೆ ಬಿಟ್ಟನು. ಪೂಸಿ ಅವನ ಕಡೆ ನೋಡಿತು, ಹಿಂದೆ ಮುಂದೆ ನೋಡಿತು. ಮತ್ತೆ ಸಲಕರಣೆಗಳ ಪೆಡ್ ಕಡೆ ಹೋಯಿತು.

ತನ್ನ ಕೊಠಡಿಗೆ ವಾಪಸು ಹೋಗುತ್ತಿದ್ದ ದಾರಿಯಲ್ಲಿ ಯೂಸಫ್ ಗಡಿಯಾರದ ಕಡೆ ನೋಡಿದನು. ಅಗ ಐದು ಗಂಟೆ ಆಗಿಹೋಗಿತ್ತು. ಅವನ ತಾಯಿ ಬೆಳಗ್ಗಿನ ತಿಂಡಿ ಮಾಡಲು ಬೇಗನೆ ಎದ್ದುಬಿಡುವಳು. ಅವನಿಗೂ ಕೂಡಾ ಮೇಲಕ್ಕೆ ಏಳುವ ಸಮಯುವಾಗಿತ್ತು. ಏಕೆಂದರೆ ಅವನು ಬೇಗನೆ ಶಾಲೆಗೆ ಹೋಗಬೇಕಾಗಿತ್ತು. ಶಾಲೆಯ ಬಸ್ಸು ಅವನ ಹಾಗೂ ಅವನ ತಂಗಿಯನ್ನು ಏಳು ಗಂಟೆಯ ಹೊತ್ತಿಗೆ ಕರೆದುಕೊಂಡು ಹೋಗುತ್ತಿತ್ತು.

ಅವನು ತನ್ನ ಮುದ್ದು ಪ್ರಾಣಿಯ ಬಗ್ಗೆ ಹಾಸಿಗೆಯಲ್ಲಿ ಯೋಚಿಸುತ್ತಾ ಮಲಗಿದನು. ತಾನು ಏನು ಮಾಡಬಹುದೆಂದು ಚಿಂತಿಸುತ್ತಿದ್ದನು. ಬಹುಶಃ ತನ್ನ

ತರಗತಿಯಲ್ಲಿ ಯಾರಾದರೂ ಪೂಸಿಯನ್ನು ತೆಗೆದುಕೊಳ್ಳುವರು. ಪೂಸಿಯನ್ನು ನೋಡಿದ ಎಲ್ಲಾ ಹುಡುಗರೂ ಅದನ್ನು ಇಷ್ಟಪಡುತ್ತಿದ್ದರು. ಆದರೆ ಅದು ಮರಿಗಳನ್ನು ಹಾಕುವುದರಲ್ಲಿದೆ ಎಂಬುದು ಗೊತ್ತಾದಾಗ ಅವರು ಹಾಗೇ ಭಾವಿಸುತ್ತಾರೆಯೇ? ಅವನು ಅವರನ್ನೇನೋ ಕೇಳುವನು. ಅವರು ಇಲ್ಲವೆಂದರೆ, ಬೇರೆ ಏನಾದರೂ ವ್ಯವಸ್ಥೆ ಮಾಡಬೇಕಾಗುವುದು. ಅದನ್ನು ಮತ್ತೆ ನೋಡಲು ಆಗದ ಇರುವಂತಹ ಜಾಗಕ್ಕೆ ಪೂಸಿಯನ್ನು ತೆಗೆದುಕೊಂಡು ಹೋಗಬಾರದು, ಎಂದುಕೊಂಡ.

ಅವನ ಕಣ್ಣುಗಳು ಎಳೆಯಲಾರಂಭಿಸಿದುವು. ಅವನು ಇನ್ನೇನು ನಿದ್ರಾದೇವಿಯ ತೆಕ್ಕೆಗೆ ಕುಸಿದು ಬೀಳಬೇಕು, ಅಷ್ಟರಲ್ಲಿ ಒಂದು ಯೋಚನೆ ಬಂತು. ಹೌದು, ತನ್ನ ಅಜ್ಜಿಯ ಹಳೆಯ ಮನೆ ಎರಡು ವರ್ಷಗಳಿಂದ ಖಾಲಿ ಬಿದ್ದಿದೆ. ಯಾರಿಗೂ ಪೂಸಿ ಬೇಡದೆ ಹೋದರೆ, ಅಲ್ಲಿ ಅವನು ಅದನ್ನು ಮುಚ್ಚಿಡುವುದು. ಯಾರೂ ಅಲ್ಲಿಗೆ ಹೋಗುವುದೇ ಇಲ್ಲ. ಮನೆಯವರೆಲ್ಲ ಎದ್ದರೂ ಯೂಸಫ್ ನಿದ್ರೆಯಲ್ಲಿದ್ದ. ಅವನ ತಂಗಿ, ಟೀನಾ ಅವನು ಏಳುವವರೆಗೂ ಅವನನ್ನು ಅಲ್ಲಾಡಿಸಿದಳು. ಅವನಿನ್ನೂ ನಿದ್ರೆಯ ಮಂಪರಿನಲ್ಲೇ ಇದ್ದನು. ಮತ್ತೆ ಅವಳು ಹೇಳಿದಳು.'ಬೇಗ, ಈಗಾಗಲೇ ಆರೂವರೆ,ಬಸ್‌ಗೆ ಹೊತ್ತಾಗುವಂತೆ ಮಾಡುವೆ' ಯೂಸಫ್ ಕೊನೆಗೆ ಬಸ್ ಬರಲು ಎರಡು ನಿಮಿಷ ಮುಂಚೆಯೇ ತಯಾರಾದನು.

ಶಾಲೆಗೆ ಹೋಗುವ ಹಾದಿ ತುಂಬಾ ದೀರ್ಘ ಹಾಗೂ ಗಜಿಬಿಜಿಯಿಂದ ಕೂಡಿತ್ತು. ತನ್ನ ಸುತ್ತಲೂ ಇರುವ ಗದ್ದಲಗಳ ಬಗ್ಗೆ ಗಮನವಿಲ್ಲದೆ, ಯೂಸಫ್ ಬಸ್‌ನ ಹಿಂಭಾಗದಲ್ಲಿ ನಿಶ್ಶಬ್ದವಾಗಿ ಕುಳಿತಿದ್ದನು. ತಾನು ತುಂಬಾ ಬೇಗ ಕೆಲಸವನ್ನು ಮುಗಿಸಬೇಕೆಂದು ಯೋಚಿಸುತ್ತಿದ್ದನು. ಅದು ಶಾಲೆಗೆ ಕೊನೆಯ ವಾರವಾಗಿತ್ತು. ಮತ್ತೆ ರಜಾ ದಿನಗಳು ಪ್ರಾರಂಭವಾಗುವ ಮೊದಲು ಯಾರಾದರೂ ತನ್ನ ಮುದ್ದಿನ ಬೆಕ್ಕನ್ನು ತೆಗೆದುಕೊಳ್ಳುವರೇ ಎಂಬುದನ್ನು ತಿಳಿದುಕೊಳ್ಳಬೇಕಾಗಿತ್ತು.

ಶಾಲೆಯ ಕೊನೆಯ ದಿನ ಬೇಗನೆ ಬಂದಿತ್ತು. ಪೂಸಿಯನ್ನು ಯಾರೂ ತೆಗೆದುಕೊಳ್ಳಲು ತಯಾರಿರಲಿಲ್ಲ. ಕೆಲವು ದಿನಗಳಿಗಾದರೂ ಸಾಧ್ಯವಾಗುವುದಿಲ್ಲ ಎಂದರು. ಯೂಸಫ್‌ಗೆ ತನ್ನ ಸಹಪಾಠಿಗಳನ್ನು ಬಯ್ಯಲಾಗುತ್ತಿರಲಿಲ್ಲ. ಅವರ ಸಮಸ್ಯೆ ಹೆಚ್ಚು ಕಡಿಮೆ ತನ್ನದರಂತೆಯೇ ಇತ್ತು. ಅವರಲ್ಲೂ ಅನೇಕರು ಫ್ಲಾಟ್‌ಗಳಿಗೆ ಸ್ಥಳ ಬದಲಾಯಿಸುತ್ತಿದ್ದರು. ತಮ್ಮ ಸ್ವಂತ ಸಾಕುಪ್ರಾಣಿಗಳಿಗೆ ಮನೆಗಳನ್ನು ಹುಡುಕುತ್ತಿದ್ದರು. ಸದ್ಯದಲ್ಲೇ ಅವರು ಸ್ಥಳ ಬದಲಾಯಿಸಬೇಕಾಗುವುದರಿಂದ, ಅವರಿಗೆ ಹೊರಗೆ ಅಲೆದಾಡುವ ಪ್ರಾಣಿಗಳನ್ನು ಮನೆಗೆ ತರದಂತೆ ಎಚ್ಚರಿಕೆ ಕೊಡಲಾಗಿತ್ತು. ಶಾಲೆಯಲ್ಲಿನ ಮಾತು ಮುಖ್ಯವಾಗಿ ಸಾಕುಪ್ರಾಣಿಗಳ ಬಗ್ಗೆ, ಹೊಸ ಬಡಾವಣೆಗೆ ಹೋದಾಗ ಅವುಗಳನ್ನು ಏನು ಮಾಡುವುದು ಎಂಬುದರ ಬಗ್ಗೆಯೇ ಆಗಿತ್ತು.

ಆದ್ದರಿಂದ ತನ್ನ ಅಜ್ಜಿಯ ಮನೆಯಲ್ಲೇ ಅದು ಇರಬೇಕಾಗಿತ್ತು. ಯೂಸಫ್ ತನ್ನ ಯೋಜನೆಯನ್ನು ಕಾರ್ಯರೂಪಕ್ಕೆ ತಂದನು. ಅವನು ಖಾಲಿ ಮನೆಗೆ ಅನೇಕ ಸಲ ಹೋದನು. ಅದೊಂದು ದುರುಸ್ತಿಯಿಲ್ಲದೆ ಬಿದ್ದಿದ್ದ ಸಣ್ಣ ಮರದ ಮನೆಯಾಗಿತ್ತು. ಅಲ್ಲಲ್ಲಿ ಹಲಗೆಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಮನೆಗೆ ಸೇರಿದಂತೆ ಹೊಲಸಾದ ತಗ್ಗುನೆಲದ ಒಪ್ಪಾರ ಇತ್ತು. ಅವನ ಅಜ್ಜಿ ಅಲ್ಲಿ ಸೌದೆಯನ್ನು ತುಂಬಿದ್ದಳು. ಅದಕ್ಕೊಂದು ಬಾಗಿಲಿತ್ತು. ಅದು ತೋಟದ ಕಡೆ ಹೋಗುತ್ತಿತ್ತು. ಬೆಳಕು ಬರುವುದಕ್ಕೆ ಒಂದು ಸಣ್ಣ ಕಿಟಕಿ ಇತ್ತು.

ಈ ಒಪ್ಪಾರ ಪೂಸಿಗೆ ಒಂದು ಉತ್ತಮ ಜಾಗವಾಗುವುದೆಂದು ಯೂಸಫ್ ಯೋಚಿಸಿದನು. ಅದನ್ನು ಸ್ವಚ್ಛ ಮಾಡಿದನು. ಆಮೇಲೆ ಪೂಸಿಯನ್ನು ಆರಾಮವಾಗಿ ಇರುವಂತೆ ಮಾಡಲು ಆ ಹಳೆ ಮನೆಯಲ್ಲಿ ಏನಾದರೂ ಅವನಿಗೆ ಕಾಣುವುದೇ ಎಂದು ನೋಡಲು ಶೋಧಿಸಿದನು. ಅವನು ಯೋಚಿಸಿದಂತೆ ಅದಕ್ಕೆ ಆಹಾರವನ್ನು ಇಡಲು ಒಂದು ಪೆಟ್ಟಿಗೆ ಸಿಕ್ಕಿತು, ಮತ್ತೆ ಒಂದು ಮೂಲೆಯಲ್ಲಿ ಹುಲ್ಲು ಮತ್ತು ಹಳೆಯ ಬಟ್ಟೆಗಳ ಹಾಸಿಗೆ ತಯಾರಿಸಿದನು.

ಮೊದಲು ತನ್ನ ಸಿದ್ಧತೆಗಳನ್ನು ಪ್ರಾರಂಭಿಸಿದಾಗ, ಯೂಸಫ್ ಸ್ವಲ್ಪ ತಪ್ಪಿತಸ್ಥನೆಂದು ಭಾವಿಸಿದನು, ಅದರಲ್ಲೂ ಮುಖ್ಯವಾಗಿ ತನ್ನ ಮನೆಯವರು ಇವನ ಗೈರುಹಾಜರಿಗಳನ್ನು ಗಮನಿಸಲು ಪ್ರಾರಂಭಿಸಿದಾಗ.

ಒಂದು ದಿನ ಅವನ ತಂಗಿ ಕೇಳಿದಳು, 'ಯೂಸಫ್', ನೀನು ಎಲ್ಲಿಗೆ ಹೋಗುವೆ?' ಹತ್ತಿರದಲ್ಲಿದ್ದ ಅವನ ತಾಯಿ ಕೂಡಾ ಹೇಳಿದಳು, 'ಹೌದು, ನೀನು ಎಲ್ಲಿ ಹೋಗುವೆ? ನನಗೆ ಏನಾದರೂ ಕೆಲಸವಿದ್ದಾಗ ನೀನು ಯಾವಾಗಲೂ ಮನೆಯಿಂದ ಹೊರಗೆ ಇರುವೆ.'

ಅದಾದ ಮೇಲೆ, ಯೂಸಫ್ ಸ್ವಲ್ಪ ಎಚ್ಚರಿಕೆಯಿಂದ ಇದ್ದನು. ಅವನ ಬೆಕ್ಕಿಗೆ ಮನೆಯನ್ನು ತಯಾರಿಸುವುದು ಒಂದು ಆಟವಾಗಲು ಪ್ರಾರಂಭಿಸಿತು, ಅವನು ಮನೆಯಿಂದ ನುಣುಚಿಕೊಳ್ಳಬೇಕಾದಾಗ, ತನಗೆ ಮಾಡಲು ಏನೂ ಇಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳುತ್ತಿದ್ದನು.

ನಿತ್ಯವೂ ಒಂದೊಂದೇ ಚಮಚ ಹಾಲಿನ ಪುಡಿ ತೆಗೆದುಕೊಂಡು ಅವನು, ಈಗಾಗಲೇ ಅರ್ಧ ಡಬ್ಬಕ್ಕಿಂತ ಹೆಚ್ಚಾಗಿ ಹಾಲಿನ ಪುಡಿಯನ್ನು ಶೇಖರಿಸಿದ್ದನು. ಅದು ಕಳ್ಳತನ ಎಂದು ಅವನು ಭಾವಿಸಿರಲಿಲ್ಲ. ತನ್ನ ಸ್ವಂತ ಖರ್ಚಿಗಾಗಿ ಕೊಟ್ಟ ಹಣವನ್ನು ಬೆಕ್ಕಿಗಾಗಿ ಖರ್ಚುಮಾಡಬೇಕೆಂದು ಕೂಡ ನಿಶ್ಚಯಿಸಿಕೊಂಡನು. ತನಗೆ ತುಂಬಾ ಇಷ್ಟವಾದ ಸಿಹಿ ತಿಂಡಿಗಳಿಲ್ಲದೆಯೇ ತಾನು ಇರುವುದಾದಲ್ಲಿ, ತಾನು ಒಂದು ವಾರಕ್ಕೆ ಎರಡು ಸಣ್ಣ ಡಬ್ಬಗಳಷ್ಟು 'ಸಾರ್‌ಡೈನ್ಸ್' (ಎಣ್ಣೆ ಊರಹಾಕಿ ಡಬ್ಬದಲ್ಲಿ ಇಡುವ ಒಂದು ಜಾತಿ ಮೀನು) ಅನ್ನು ಕೊಳ್ಳಲು ಬೇಕಾಗುವಷ್ಟು ಹಣವನ್ನು ಉಳಿಸಬಹುದು ಎಂದುಕೊಂಡ. ಅವನು ಹೆಚ್ಚಿನ ಹಾಲಿನ ಪುಡಿಯನ್ನು

ಸಂಗ್ರಹಿಸುವ ವಿಧಾನವನ್ನು ಯೋಚಿಸಲಾರಂಭಿಸಿದನು. ತನ್ನ ಡಬ್ಬಿಯಲ್ಲಿರುವ ಹಣವನ್ನು ಎಣಿಸಿದನು. ಒಂದು ದೊಡ್ಡ ಹಾಲಿನ ಡಬ್ಬವನ್ನು ಕೊಳ್ಳುವಷ್ಟು ಮಾತ್ರ ಇತ್ತು. ಅದು ಎಲ್ಲಿಯವರೆಗೆ ಬರುವುದು?

ಫ್ಲಾಟಿಗೆ ಜಾಗ ಬದಲಾಯಿಸುವ ಕಾಲ ಹತ್ತಿರ ಬರುತ್ತಿತ್ತು. ಎಲ್ಲಾ ಕೊಠಡಿಯಲ್ಲೂ ಗಂಟು-ಮೂಟೆಗಳು, ಪೆಟ್ಟಿಗೆಗಳು ತುಂಬಿದ್ದವು. ಅವನ್ನು ಬಿಗಿಯಾಗಿ ಹಗ್ಗದಿಂದ ಕಟ್ಟಿದ್ದರು. ತಾಯಿ ತುಂಬಾ ಕಷ್ಟಪಟ್ಟು ಕೆಲಸಮಾಡುತ್ತಿದ್ದಳು, ತಂದೆ ಕೂಡಾ ಫ್ಲಾಟಿನಲ್ಲಿ ಆಗಬೇಕಾದ ಬದಲಾವಣೆಗಳನ್ನು ನೋಡುವ ಕೆಲಸದಲ್ಲಿ ತೊಡಗಿದ್ದರು.

ಪೂಸಿಯನ್ನು ತನ್ನ ಹೊಸ ಮನೆಗೆ ಅಭ್ಯಾಸವಾಗುವಂತೆ ಮಾಡಲು ಯೂಸಫ್ ಪ್ರಯತ್ನಿಸಿದನು. ಅವನು ಅದನ್ನು ಅನೇಕ ಸಲ ಕರೆದುಕೊಂಡು ಹೋದನು. ಯೂಸಫ್ ಪೂಸಿಯನ್ನು ಹೊಸ ಮನೆಗೆ ಅಭ್ಯಾಸ ಮಾಡಿಸಲು ಬಿಟ್ಟ. ಅದು ಪ್ರತಿ ಸಾರಿಯೂ ಹಿಂದಿರುಗಿ ಬರುತ್ತಿತ್ತು. ಒಂದು ದಿನ ಅದನ್ನು ಅಲ್ಲೇ ಬಂದ್ ಮಾಡಿದ. ಬಾಗಿಲನ್ನು ಚೆನ್ನಾಗಿ ಭದ್ರಪಡಿಸಿ ಬಂದಿದ್ದ. ಅವನು ಮನೆಗೆ ಬರುವ ಮುಂಚೆಯೇ ಪೂಸಿ ಹಿಂದಿರುಗಿ ಬಂದಿತ್ತು. ಕಿಟಕಿ ಮೂಲಕ ಹಿಂದಕ್ಕೆ ಬಂದಿತ್ತು.

ಮುಂದಿನ ಶನಿವಾರ, ಜಾಗವನ್ನು ಬದಲಾಯಿಸಿ ಹೊಸ ಮನೆಗೆ ಹೋಗಬೇಕೆಂದು ತಾಯಿ ಹೇಳಿದಳು. ಹೊರಡಲು ಎಲ್ಲವನ್ನು ಸಿದ್ಧಪಡಿಸಿಕೊಂಡಿದ್ದಳು. ಬೆಕ್ಕಿಗೆ ಮನೆಯನ್ನು ಹುಡುಕಲಾಗಿತ್ತು. ಫ್ಲಾಟನ್ನು ಸ್ವಚ್ಛವಾಗಿ ಗುಡಿಸಲಾಗಿತ್ತು. ಪರದೆಗಳನ್ನು ಹೊಲಿಯಲಾಗಿತ್ತು. ದೀಪಕ್ಕೆ ಮುಚ್ಚಳಿಕೆಗಳನ್ನು ಜೋಡಿಸಲಾಗಿತ್ತು; ತಂದೆ ದೀರ್ಘಕಾಲದ ರಜದ ಮೇಲಿರುವುದರಿಂದ ಮತ್ತೆ ಮಾಡಬೇಕಾದ ಕೆಲಸಗಳ ಕಡೆ ನಿಗಾವಹಿಸುವರು. ಅವರು ಪೂಸಿಯನ್ನು ಮಂಗಳವಾರ ಮಧ್ಯಾಹ್ನ ಕರೆದುಕೊಂಡು ಹೋಗುವವರಿದ್ದಾರೆ, ಯೂಸಫ್‌ಗೆ ಪೂಸಿಯನ್ನು ಅದಕ್ಕಾಗಿ ಸಿದ್ಧಗೊಳಿಸುವ ಜವಾಬ್ದಾರಿ ವಹಿಸಲಾಗಿತ್ತು.

ಪೂಸಿಯನ್ನು ತಾನು ಅದರ ಹೊಸ ಮನೆಗೆ ಸೋಮವಾರ ರಾತ್ರಿ ಕರೆದುಕೊಂಡು ಹೋಗಬೇಕೋ ಅಥವಾ ಮಂಗಳವಾರ ಬೆಳಗ್ಗೆಯೋ ಎಂದು ಯೂಸಫ್ ಆಲೋಚಿಸುತ್ತಿದ್ದನು. ಪ್ರತಿಯೊಬ್ಬರೂ ಅವರವರ ಕೆಲಸದಲ್ಲಿ ತೊಡಗಿರುತ್ತಾರೆ, ಅವರ ಕಣ್ಣು ತಪ್ಪಿಸಬಹುದು ಎಂದುಕೊಂಡ.

ಸೋಮವಾರ ತುಂಬಾ ಕೆಲಸವಿರುವ ದಿನ. ಯೂಸಫ್ ಇಡೀ ಬೆಳಗ್ಗೆ ತನ್ನ ಸ್ವಂತ ಸಾಮಾನುಗಳತ್ತ ಗಮನ ಕೊಟ್ಟನು. ಊಟವಾದ ಮೇಲೆ ತಾಯಿಗೆ ಹೊಸ ಫ್ಲಾಟಿನಲ್ಲಿ ಸಹಾಯ ಮಾಡಬೇಕಾಗಿತ್ತು. ಫ್ಲಾಟ್‌ನ ಎಂಟನೇ ಮಹಡಿಯ ಕಿಟಕಿಗಳಿಂದ ಸೂರ್ಯ ಮುಳುಗುತ್ತಿರುವುದು, ಕತ್ತಲಾಗುತ್ತಿರುವುದನ್ನು ನೋಡಿ ಅವನು ಆತಂಕಗೊಂಡನು.

ಅವರು ಮನೆ ಸೇರಿದಾಗ ಕತ್ತಲಾಗಿತ್ತು. ಕೊಠಡಿಯಿಂದ ಕೊಠಡಿಗೆ ತಿರುಗಾಡುತ್ತಾ, ಪೂಸಿ ದುಃಖದಿಂದ ಮಿಯಾಂ ಎಂದು ಕೂಗುತ್ತಾ ಇತ್ತು. ಯೂಸಫ್ ಅದಕ್ಕೆ

ಒಂದು ಬಟ್ಟಲು ಹಾಲನ್ನು ಕೊಟ್ಟನು. ಅದು ಅದನ್ನು ನಾಲಿಗೆಯಿಂದ ನೆಕ್ಕುತ್ತಾ ತನ್ನನ್ನು ತಾನೇ ನೆಕ್ಕಿ ಸ್ವಚ್ಛಗೊಳಿಸಿಕೊಂಡು, ಅವನ ಬಳಿ ಹೋಯಿತು. ಅವನ ಕೈಗಳನ್ನೂ ನೆಕ್ಕಿತು. ಅದರ ನಾಲಿಗೆಯ ಒರಟು ಸ್ಪರ್ಶ ಅವನಿಗೆ ಇಷ್ಟವಾಗಲಿಲ್ಲ, ಆದರೆ ತನ್ನ ಕೈಗಳನ್ನು ಅವನು ಹಿಂದಕ್ಕೆ ತೆಗೆದುಕೊಳ್ಳಲಿಲ್ಲ.ಆ ಸಂಜೆಯ ಉಳಿದ ಸಮಯವನ್ನೆಲ್ಲಾ ತನ್ನ ಮುದ್ದು ಪ್ರಾಣಿಯ ಹತ್ತಿರದಲ್ಲೇ ಕಳೆದ. ಅದನ್ನು ಹಳೆಯ ಮನೆಗೆ ಕರೆದುಕೊಂಡು ಹೋಗಲು ಅವಕಾಶಕ್ಕಾಗಿ ಕಾಯುತ್ತಿದ್ದನು, ಆದರೆ ಆ ಅವಕಾಶ ಅವನಿಗೆ ಸಿಗಲೇ ಇಲ್ಲ.

ಮಂಗಳವಾರ ಬೆಳಿಗ್ಗೆ ಅಸಾಧಾರಣವಾಗಿ ತಣ್ಣಗಿತ್ತು. ಪೂಸಿಯನ್ನು ಸಾಗಿಸುವ ಕೆಲಸವನ್ನು ಮಾಡಿ ಮುಗಿಸಲು ಸೊಗಸಾದ ದಿವಸವಾಗಿತ್ತು. ಯೂಸಫ್‌ನ ತಂದೆ–ತಾಯಿ ತುಂಬಾ ಬೇಗನೆ ಫ್ಲಾಟಿಗೆ ಹೋದರು, ಒಳ್ಳೆಯ ಅವಕಾಶ ಸಿಕ್ಕಿತು. ಪೂಸಿಯನ್ನು ಎತ್ತಿಕೊಂಡು ಅವನು ಮನೆಯಿಂದ ನುಣುಚಿಕೊಂಡನು. ಒಂದುವೇಳೆ ತನ್ನ ತಂದೆ–ತಾಯಿ ಹಿಂದಕ್ಕೆ ಅನಿರೀಕ್ಷಿತವಾಗಿ ಬಂದರೆ ಎಂದುಕೊಂಡು ರಸ್ತೆಯಿಂದ ದೂರವಿದ್ದನು. ಒಪ್ಪಾರಿನ ಒಳಗೆ ಬಂದ ಕೂಡಲೇ ಪೂಸಿಯನ್ನು ಒಳಗೆ ಹೋಗಲು ಬಿಡುವ ಮೊದಲು ಬಾಗಿಲು ಮತ್ತು ಕಿಟಕಿಯನ್ನು ಹಾಕಿದನು.

'ಪೂಸಿ ನೀನು ಇಲ್ಲಿರುವೆ' ಮೂಲೆಯ ಕಡೆ ತೋರಿಸುತ್ತಾ, 'ಒಂದು ಒಳ್ಳೆಯ ಹಾಸಿಗೆ ನಿನಗಾಗಿದೆ ಬಾ, ಈಗ ಇದು ನಿನ್ನ ಹೊಸ ಮನೆ, ನಾನು ನಿನ್ನನ್ನು ಇಲ್ಲಿ ಬೇಗನೇ ಬಿಡಬೇಕಾಗಿದೆ' ಎಂದು ಹೇಳಿದ.

'ಮಿಯಾಂ, ಮಿಯಾಂ', ಎನ್ನುತ್ತಾ ಪೂಸಿ ಯೂಸಫ್‌ನ ಕಾಲುಗಳಿಗೆ ತನ್ನ ಮೈ ಉಜ್ಜಿತು. ಅವನು ಬಗ್ಗಿ ಅದನ್ನು ಮೆಲ್ಲನೆ ಸವರಿದನು.

'ಕೆಳಗೆ ಮಲಗಿಕೋ, ಯೋಚಿಸಬೇಡ, ಎಲ್ಲಾ ಸರಿಯಾಗುವುದು. ನನಗೆ ಸಾಧ್ಯಾವಾದಾಗಲೆಲ್ಲಾ ನಿನ್ನನ್ನು ನೋಡಲು ಬರುವೆನು'.

ಅವನನ್ನು ನೊಡುತ್ತಾ , ಪೂಸಿ ತನ್ನ ಹಾಸಿಗೆಯ ಮೇಲೆ ಮುದುರಿಕೊಂಡಿತು. ಯೂಸಫ್ ಬಾಗಿಲ ಬಳಿ ಹೋದಾಗ, ಅದು ಅಲ್ಲಾಡಲಿಲ್ಲ. ತಾನು ಅಲ್ಲೇ ಇರಬಹುದೆಂದು ಅದಕ್ಕೆ ಗೊತ್ತಾದಂತಿತ್ತು.

ಸಕಾಲಕ್ಕೆ ಯೂಸಫ್ ಮನೆಗೆ ಬಂದು ಸೇರಿದನು. ಅವನ ತಂದೆ–ತಾಯಿ ಊಟದ ಡಬ್ಬಗಳೊಡನೆ ವಾಪಸು ಬಂದಾಗ ಅವನು ಕೆಲಸದಲ್ಲಿ ತೊಡಗಿದ್ದನು. ಯಾರೂ ಪೂಸಿ ಬಗ್ಗೆ ಏನನ್ನೂ ಹೇಳಲಿಲ್ಲ. ಪೂಸಿ ಇಲ್ಲದಿರುವುದನ್ನು ಯಾವಾಗ ಗಮನಿಸುವರು ಎಂದು ಚಿಂತಿಸುತ್ತಿದ್ದನು.

'ಯೂಸಫ್, ಸ್ನಾನ ಮುಗಿದ ಮೇಲೆ ನಾವು ಪೂಸಿಯನ್ನು ಸಾಕುಪ್ರಾಣಿಗಳನ್ನು ನೋಡಿಕೊಳ್ಳುವ ಸಂಘಕ್ಕೆ ಕರೆದುಕೊಂಡು ಹೋಗುವೆವು. ಅದು ಯಾವ ಬಟ್ಟೆಗಳ ಮೇಲೆ ಮಲಗುತ್ತದೆಯೋ ಆ ಬಟ್ಟೆಗಳನ್ನು ನೀನು ತರುವುದು ಉತ್ತಮ. ತನ್ನ ಹೊಸ ಜಾಗದಲ್ಲಿ ಹೊಂದಿಕೊಂಡು ಉಳಿದುಕೊಳ್ಳಲು ತೊಂದರೆಯನ್ನು ಕೊಡುವುದಿಲ್ಲ.'

ತಂದೆ "ಪೂಸಿ, ಪೂಸಿ" ಎಂದು ಕೂಗುವುದನ್ನು ಕೇಳಿದಾಗ ಯೂಸಫ್ ಕೊನೆಯ ತಟ್ಟೆಯನ್ನು ತೊಳೆಯುತ್ತಿದ್ದ. ತಂದೆಯೊಡನೆ ಟೀನಾಳ ಧ್ವನಿಯೂ ಸೇರಿತ್ತು. ಪೂಸಿಯನ್ನು ಹುಡುಕಲು ಸಹಾಯ ಮಾಡುವಂತೆ ತನ್ನನ್ನು ಕರೆಯಲಿಲ್ಲವೆಂದು ಯೂಸಫ್‌ಗೆ ಸಂತೋಷವಾಯಿತು.

ಎರಡೂ ಕಾಲು ಗಂಟೆಗೆ ತಂದೆ ಹುಡುಕುವುದನ್ನು ನಿಲ್ಲಿಸಿದರು. 'ಏನೂ ಪ್ರಯೋಜನವಿಲ್ಲ, ಈಗ ಅದು ಸಿಕ್ಕಿದರೂ ನಮಗೆ ಸಕಾಲದಲ್ಲಿ ಹೋಗಲು ಆಗುವುದಿಲ್ಲ. ನಾನು ಫೋನ್ ಮಾಡಿ ಸಾಕು ಪ್ರಾಣಿಗಳನ್ನು ನೋಡಿಕೊಳ್ಳುವ ಸಂಘದವರಿಗೆ ತಿಳಿಸುತ್ತೇನೆ.'

ಟೀನಾ ಬೇಸರಗೊಂಡಳು. 'ನಾವು ಹೊರಡುವ ಮೊದಲು ಅದು ಸಿಗದಿದ್ದರೆ ನಾವೇನು ಮಾಡುವುದು? ಅದಕ್ಕೆ ನಮ್ಮ ಹೊಸ ಮನೆ ಕೂಡ ಗೊತ್ತಿಲ್ಲ'.

'ಯೋಚಿಸಬೇಡ,' ಅದು ಇಲ್ಲಿಗೆ ವಾಪಸು ಬಂದೇ ಬರಬೇಕು. ಅದು ವಾಪಸ್ ಬಂದಿದೆಯೇ ಎಂದು ನೋಡಲು ನಾನು ಪ್ರತಿನಿತ್ಯ ಬರುವೆನು. ಈ ಎಲ್ಲಾ ಗದ್ದಲ, ಗಲಾಟೆ ಅದನ್ನು ಗಾಬರಿಗೊಳಿಸಿದೆ.'

ಆ ಸಂಜೆಯ ಹೊತ್ತಿಗೆ ಮನೆಯವರು ಹೊಸ ಫ್ಲಾಟಿನಲ್ಲಿ ಇದ್ದರು. ಅವರು ತಮ್ಮ ಹಳೆಯ ಮನೆಯನ್ನು ಒಂದು ಚೂರೂ ಕೊಳೆ ಇಲ್ಲದಂತೆ ಚೊಕ್ಕಟವಾಗಿರುವಂತೆ ಬಿಡಬೇಕೆಂದು ತಾಯಿ ಒತ್ತಾಯಪಡಿಸಿದಳು. ಈ ಸಮಯದಲ್ಲಿ ಮಾಡಲು ತುಂಬಾ ಕೆಲಸವಿದ್ದುದರಿಂದ ಯೂಸಫ್ ಪೂಸಿ ವಿಷಯವಾಗಿ ಯೋಚಿಸಲಿಲ್ಲ.

ಫ್ಲಾಟನ್ನು ಚೆನ್ನಾಗಿ ಅಣಿಗೊಳಿಸಲಾಗಿತ್ತು. ಮೂರು ಮಲಗುವ ಕೊಠಡಿಗಳು ಅಲ್ಲಿದ್ದುವು. ಯೂಸಫ್ ತನಗೆ ಸಿಕ್ಕ ಕೋಣೆಯಲ್ಲಿ ತೃಪ್ತಿಗೊಂಡಿದ್ದನು. ಅದು ಚಿಕ್ಕದಾಗಿ ಹಿತಕರವಾಗಿತ್ತು. ಊಟದ ಹೊತ್ತಿಗೆ ಎಲ್ಲಾ ಸಾಮಾನುಗಳೂ ತಮ್ಮ ತಮ್ಮ ಸ್ಥಾನದಲ್ಲಿದ್ದವು. ಅಡಿಗೆ ಮಾಡಲು ಸಮಯವಿರಲಿಲ್ಲ, ಆದ್ದರಿಂದ ಮನೆಯವರು ನೆರೆಹೊರೆಯಲ್ಲಿರುವ ಹೊಟೆಲ್‌ಗಳಿಗೆ ಹೋಗಿದ್ದರು.

ತಂದೆಯವರು ಎಲ್ಲರಿಗೂ ಲಿಫ್ಟ್ ಉಪಯೋಗಿಸುವುದು ಹೇಗೆಂಬುದನ್ನು ಹೇಳಿಕೊಟ್ಟರು. ಗಲೀಜು ಮಾಡದಿರುವಂತೆ ಎಚ್ಚರಿಕೆ ಕೊಟ್ಟರು. ಲಿಫ್ಟ್ ಅನೇಕ ಫ್ಲಾಟ್‌ಗಳಿಗೆ ಸೇವೆ ಸಲ್ಲಿಸುತ್ತಿತ್ತು. ಅದು ಚೊಕ್ಕಟವಾಗಿ ಹಾಗೂ ಒಳ್ಳೆಯ ಸ್ಥಿತಿಯಲ್ಲಿ ಇರಬೇಕು. ಲಿಫ್ಟ್ ಕೆಲವು ವೇಳೆ ಮಧ್ಯೆ ಸಿಕ್ಕಿಕೊಂಡರೆ ಏನು ಮಾಡಬೇಕೆಂಬುದನ್ನು ಹೇಳಿದರು.

ಅವರು ಊಟಮಾಡುತ್ತಿದ್ದಾಗ, ಯೂಸಫ್ ಪೂಸಿಯನ್ನು ಜ್ಞಾಪಿಸಿಕೊಂಡನು. ಅವರ ಊಟದಲ್ಲಿ ಸ್ವಲ್ಪ ಮೀನು ಉಳಿದುಕೊಂಡಿತ್ತು, ಅದನ್ನು ತನ್ನ ಮುದ್ದು ಪ್ರಾಣಿಗೆ ತೆಗೆದುಕೊಂಡು ಹೋಗಬೇಕೆಂದು ಆಸೆಯಾಯಿತು, ಆದರೆ ಅವನ ತಂದೆ ಅನುಮಾನ ಪಡುವರು ಮತ್ತು ಪ್ರಶ್ನೆಗಳನ್ನು ಕೇಳಲಾರಂಭಿಸುವರು ಎಂದು ಸುಮ್ಮನಾದ.

ಬೇರೊಂದು ಕೋಣೆಯಲ್ಲಿ ತಂದೆಯವರು ಟೆಲಿವಿಷನ್ ಸೆಟ್ ಸ್ವಿಚ್ ಹಾಕಿದರು. ಯೂಸಫ್ ಇತರರೊಡನೆ ಪಾಶ್ಚಿಮಾತ್ಯ ಕಾರ್ಯಕ್ರಮವನ್ನು ನೋಡಲು ಕುಳಿತನು. ಕಾರ್ಯಕ್ರಮ ಇಷ್ಟವಿದ್ದಾಗ್ಯೂ ಅವನಿಗೆ ನಿದ್ದೆ ಬಂದಿತ್ತು.

ಮಾರನೇ ದಿನ ಬೆಳಗ್ಗಿನ ತಿಂಡಿಯಾದ ಮೇಲೆ, ತಾನು ನೆರೆಹೊರೆಯ ಜಾಗಗಳನ್ನು ಶೋಧಿಸಲು ತಿರುಗಾಡಿಕೊಂಡು ಬರುವುದಾಗಿ ಹೇಳಿ, ಆತುರದಿಂದ ಹಳೆಯ ಮನೆಗೆ ಭೇಟಿಕೊಡಲು ಹೊರಟನು. ಅಲ್ಲಿ ಅನೇಕ ಫ್ಲಾಟ್‌ಗಳಿದ್ದುವು; ತಾನು ತನ್ನ ರಸ್ತೆಯನ್ನು ಮರೆತು ತಪ್ಪಿಸಿಕೊಳ್ಳುವುದಿಲ್ಲವೆಂದು ಆಶಿಸುತ್ತಾ ಅತ್ತ ಹೊರಟ. ಅಜ್ಜಿಯ ಹಳೆಯ ಮನೆಗೆ ಅಲ್ಲಿಂದ ಅಷ್ಟೇನೂ ದೂರವಿರಲಿಲ್ಲ.

ಅವನು ಬಂದು ಸೇರಿದಾಗ, ಬಾಗಿಲ ಬಳಿ ಪೂಸಿ 'ಮಿಯಾಂ' ಎನ್ನುತ್ತಾ, ಅವನನ್ನು ಕರೆಯುತ್ತಿತ್ತು. ಅವನು ಪ್ರವೇಶಿಸಿದ ಕೂಡಲೇ ಅದು ಅವನ ಮೇಲೆ ಹಾರಿತು ಮತ್ತು ತನಗೆ ಎಷ್ಟು ಸಂತೋಷವಾಗಿದೆ ಎಂಬುದನ್ನು ತೋರಿಸಲು ಅವನನ್ನು ನೆಕ್ಕಲಾರಂಭಿಸಿತು. ಅವನು ಅದನ್ನು ಹೊರಗೆ ಬಿಟ್ಟು ಒಟ್ಟಿಗೆ ಸ್ವಲ್ಪ ಅಡ್ಡಾಡಲು ಹೋದ, ಹುಡುಗ ಮತ್ತು ಬೆಕ್ಕು. ಆಮೇಲೆ, ಪೂಸಿ ತಮ್ಮ ಹಳೆ ಮನೆ ಕಡೆ ಹೋಗಲು ಪ್ರಾರಂಭಿಸಿದ್ದುದರಿಂದ ಅದನ್ನು ವಾಪಸು ಉಗ್ರಾಣಕ್ಕೆ ಹೊತ್ತುಕೊಂಡು ತಂದನು. ಅದಕ್ಕೆ ಒಂದು ತಟ್ಟೆ ಹಾಲು ಮತ್ತು 'ಸಾರ್‌ಡೈನ್' ಕೊಟ್ಟನು. ಪೂಸಿ ತುಂಬಾ ಆಸೆಯಿಂದ ತಿಂದು, ಎಂದಿನಂತೆ ತನ್ನನ್ನು ತಾನೇ ಸ್ವಚ್ಛ ಮಾಡಿಕೊಂಡಿತು. ಯೂಸಫ್ ಹುಲ್ಲನ್ನು ಮಗುಚಿಹಾಕಿ ಅದರ ಹಾಸಿಗೆಯನ್ನು ಸ್ವಚ್ಛ ಮಾಡಿದನು. ಎಲ್ಲಾ ಮಾಡಿದ ಮೇಲೆ, ಊಟದ ಸಾಮಗ್ರಿಗಳನ್ನು ಇಟ್ಟಿದ್ದ ಪೆಟ್ಟಿಗೆ ಕಡೆ ಅವನು ನೋಡಿದನು. ತಂದೆ ತನಗೆ ಹೆಚ್ಚಿನ ಖರ್ಚಿಗೆ ಹಣಕೊಟ್ಟು, ಹೆಚ್ಚು ಆಹಾರ ಸಾಮಗ್ರಿಗಳನ್ನು ಕೊಂಡುಕೊಂಡು ತರುವವರೆಗೆ ಆಗುವಷ್ಟು ಡಬ್ಬಗಳಿವೆಯೇ ಎಂಬುದನ್ನು ನಿಶ್ಚಯಿಸಿಕೊಳ್ಳುವುದಕ್ಕಾಗಿ ಅವುಗಳನ್ನು ಎಣಿಸಿದನು.

ಶಾಲೆಯ ರಜೆ ಕಾಲದಲ್ಲಿ ಹೀಗೆಯೇ ನಡೆಯಿತು. ಆಗಾಗ್ಯೆ ಯೂಸಫ್ ಅದನ್ನು ನೋಡಿಬರುತ್ತಿದ್ದನು, ಅದಕ್ಕೆ ಚೆನ್ನಾಗಿ ಆಹಾರ ಹಾಕುತ್ತಿದ್ದನು. ಅವನನ್ನು ಅಸಂತೋಷಗೊಳಿಸಿದ ಒಂದೇ ಒಂದು ವಿಷಯ ಎಂದರೆ, ತಂದೆ ಪ್ರತಿದಿನ ಬೆಳಿಗ್ಗೆ ಅವರ ಹಳೆಯ ಮನೆಗೆ ಪೂಸಿ ವಾಪಸು ಬಂದಿದೆಯೇ ಎಂಬುದನ್ನು ನೋಡಲು ಹೋಗುತ್ತಿದ್ದುದು.

ಶಾಲೆ ಪುನಃ ತೆರೆಯುವ ಮುಂಚಿನ ದಿನ ಬೆಳಿಗ್ಗೆ ಉಪಾಹಾರ ಮಾಡುವಾಗ, ಸದ್ಯದಲ್ಲೇ ಪೂಸಿಗೆ ಮರಿಗಳಾಗುವುವೆಂದು ತಂದೆ ಹೇಳಿದರು. ಹೆಚ್ಚಿನ ಹಾಲು ಬೇಕಾಗುವುದರಿಂದ, ಬಹುಶಃ ಯಾರಾದರೂ ಅದನ್ನು ನೋಡಿಕೊಳ್ಳಲು ಸಿಕ್ಕಿ ಪೂಸಿಗೆ ಒಂದು ಒಳ್ಳೆ ಜಾಗ ಸಿಕ್ಕಿರಬಹುದೆಂದು ತಂದೆ ಆಶಿಸಿದರು.

ಯೂಸಫ್ ಹೆಚ್ಚಿನ ಹಾಲಿನ ಬಗ್ಗೆ ಯೋಚಿಸಿಯೇ ಇರಲಿಲ್ಲ. ತಂದೆಗೆ ಬೆಕ್ಕು ಎಲ್ಲಿದೆ ಎಂಬುದನ್ನು ಹೇಳಲು ಬಹುಶಃ ಇದು ಸಮಯವಾಗಿತ್ತು. ಅವನು

ಇನ್ನೇನು ಹೇಳಿಬಿಡುವುದರಲ್ಲಿದ್ದ, ಆದರೆ, ತಂದೆ-ತಾಯಿ ತನ್ನೊಡನೆ ಕೋಪಿಸಿಕೊಳ್ಳುವರೆಂದು ಹೆದರಿದನು.

ಒಂದು ದಿನ ಶಾಲೆಯ ಹೊಸ ವ್ಯಾಸಂಗಾವಧಿ ಪ್ರಾರಂಭವಾದಾಗ, ತಾಯಿ ಟೀನಾಳನ್ನು ಶಾಲೆ ಮುಗಿಸಿದ ನಂತರ ಹಳ್ಳಿನ ವೈದ್ಯರ ಬಳಿ ಕರೆದುಕೊಂಡು ಹೋಗಬೇಕಾಗಿತ್ತು. ಯೂಸಫ್ ಪೂಸಿಯನ್ನು ನೋಡಲು ಆತುರವಾಗಿ ಹೋದನು. ಅವನು ಉಗ್ರಾಣದ ಬಾಗಿಲನ್ನು ತೆಗೆದಾಗ, ಅವನಿಗೆ ತುಂಬಾ ಆಶ್ಚರ್ಯ ಉಂಟಾಯಿತು.

ಪೂಸಿ ತನ್ನ ಮೂಲೆಯಲ್ಲಿ ಮಲಗಿಕೊಂಡು, ತನ್ನ ಮರಿಗಳನ್ನು ಒಂದಾದ ಮೇಲೊಂದರಂತೆ ನೆಕ್ಕುತ್ತಾ ಇತ್ತು. ಅಲ್ಲಿ ಮೂರು ಮರಿಗಳಿದ್ದುವು. ಅವುಗಳು ಇನ್ನೂ ನಿಂತುಕೊಳ್ಳುವಂತಿರಲಿಲ್ಲ, ಯೂಸಫ್ ಅವುಗಳನ್ನು ನೋಡುತ್ತಿದ್ದಾಗ ಏಳುತ್ತಾ, ಬೀಳುತ್ತಾ ಇದ್ದುವು. ಅವನಿಗೆ ನಿರಾಶೆಯಾಯಿತು. ಆದರೆ ಪೂಸಿ ಸಂತೋಷದಿಂದ 'ಪರ್'ಗುಟ್ಟಿತು. ಅವನು ಅದಕ್ಕೆ ಕೊಟ್ಟ ಪ್ರತಿಯೊಂದು ಹನಿ ಹೆಚ್ಚಿನ ಹಾಲನ್ನೂ ನಾಲಗೆಯಿಂದ ನೆಕ್ಕುತ್ತಾ ಕುಡಿಯಿತು. ಹಾಲಿನ ಪುಡಿ ಹೆಚ್ಚುಕಡಿಮೆ ಮುಗಿದು ಹೋಗಿತ್ತು. ಮತ್ತೆ ಇನ್ನೊಂದು ಡಬ್ಬಕ್ಕೆ ಬೇಕಾದಷ್ಟು ಹಣವನ್ನು ತನಗೆ ಉಳಿಸಲು ಆಗದಿದ್ದರೆ ತಾನೇನು ಮಾಡಬೇಕೆಂದು ಯೂಸಫ್ ಚಿಂತಿಸಿದ.

ಶಾಲೆಯಲ್ಲಿ ಯೂಸಫ್ ಅನೇಕ ಸಲ ಉಪಾಧ್ಯಾಯರೊಡನೆ ತೊಂದರೆಗೆ ಸಿಕ್ಕಿಕೊಂಡನು. ಅವನಿಗೆ ಅಭ್ಯಾಸದ ಕಡೆ ಗಮನ ಕೊಡಲಾಗಲಿಲ್ಲ. ಬಿಡುಗಡೆಯ ಗಂಟೆ ಹೊಡೆಯುವುದನ್ನೇ ಕಾಯುತ್ತಿದ್ದ. ಅವನು ತರಗತಿಯಿಂದ ಹೊರಗೆ ನುಗ್ಗಲು ಸಿದ್ಧನಾಗಿದ್ದ. ಅಷ್ಟರಲ್ಲಿ ಉಪಾಧ್ಯಾಯಿನಿ ಅವನನ್ನು ಕರೆದು 'ಯೂಸಫ್, ದಯವಿಟ್ಟು ಸ್ವಲ್ಪ ನಿಂತುಕೊಳ್ಳುವೆಯಾ?'

ಎಲ್ಲಾ ಹುಡುಗರೂ ಹೊರಟು ಹೋದ ಮೇಲೆ ಉಪಾಧ್ಯಾಯಿನಿ ಹೇಳಿದರು, 'ಯೂಸಫ್, ಇಲ್ಲಿ ಬಾ, ನಿನಗೇನು ತೊಂದರೆ ಎಂದು ಈಗ ಹೇಳು. ಇವತ್ತು ದಿನವೆಲ್ಲಾ ನೀನು ಪಾಠದ ಕಡೆ ಗಮನ ಕೊಡುತ್ತಿರುವಂತೆ ಕಾಣಲಿಲ್ಲ. ನಿನ್ನ ಹಳೆಯ ಮನೆ ಬಿಟ್ಟಿದ್ದಕ್ಕೆ ದುಃಖ ಪಡುತ್ತಿದ್ದೀಯಾ? ಫ್ಲಾಟಿನಲ್ಲಿರುವುದು ಇಷ್ಟವಿಲ್ಲವೇ?'

'ಏನಿಲ್ಲ ಮೇಡಮ್ ಎಲ್ಲಾ ಸರಿಯಾಗಿದೆ'.

'ಬೇರೆ ವಿಷಯದಲ್ಲಿ ಏನಾದರೂ ತೊಂದರೆಯೇ?, ನೀನು ತುಂಬಾ ಬೇಜಾರುಗೊಂಡಂತಿರುವೆ. ನನ್ನ ಹತ್ತಿರ ಹೇಳು ಪರವಾಗಿಲ್ಲ'.

ಉಪಾಧ್ಯಾಯಿನಿ ಕೋಪಗೊಳ್ಳುವರೆಂದು ಅವನು ನಿರೀಕ್ಷಿಸಿದ್ದನು, ಆದರೆ ಹಾಗಲ್ಲದೇ ಇದ್ದಾಗ, ತನ್ನ ತಲೆ ಬಗ್ಗಿಸಿದನು. ಅವನ ಕೆನ್ನೆಗಳ ಮೇಲೆ ಕಣ್ಣೀರು ಉರುಳಲಾರಂಭಿಸಿತು.

'ನನ್ನ ಬೆಕ್ಕು'.



'ನಿನ್ನ ಮುದ್ದು ಸಾಕುಪ್ರಾಣಿ ಇಲ್ಲವೆಂದು ದುಃಖಿಸುತ್ತಿದ್ದೀಯಾ, ಅಲ್ಲವೇ?'

ಯೂಸಫ್ ಏನು ಹೇಳುವುದಕ್ಕೂ ಆಗದಷ್ಟು ದುಃಖಿತನಾಗಿದ್ದ. ಅವನ ಉಪಾಧ್ಯಾಯಿನಿ ಅವನು ಅಳುವುದನ್ನು ನಿಲ್ಲಿಸುವವರೆಗೂ ಕಾದು ನಿಂತು ಅವನ ಭುಜ ತಟ್ಟಿ ಎಲ್ಲವೂ ಸರಿಹೋಗುತ್ತೆ ಎಂದು ಹೇಳಿದರು.

'ನೀನು ಉತ್ತಮ ವಿದ್ಯಾರ್ಥಿ, ಯೂಸಫ್, ನಿನ್ನ ಬಗ್ಗೆ ನನಗೆ ಚಿಂತೆಯಾಗಿದೆ'.

ಟೀನಾ ತನ್ನ ಸಹೋದರನಿಗಾಗಿ ಹೊರಗೆ ಕಾಯುತ್ತಾ ಇದ್ದಳು; ಆದ್ದರಿಂದ ಅವರಿಬ್ಬರೂ ಮನೆಗೆ ಹೋದಾಗ ತುಂಬಾ ಹೊತ್ತಾಗಿತ್ತು, ಅವರ ತಾಯಿ ಏಕೆ ಹೊತ್ತಾಯಿತೆಂದು ಕೇಳಿದಳು.

'ನಾನು ಯೂಸಫ್‌ಗಾಗಿ ಕಾಯಬೇಕಾಯಿತು.' ಟೀನಾ ಉತ್ತರಿಸಿದಳು, 'ಅವನು ಶಾಲೆ ಮುಗಿದ ಮೇಲೆ ಒಳಗೇ ನಿಲ್ಲಬೇಕಾಯಿತು'.

'ಏಕೆ?' ಅವರ ತಂದೆ ವಿವರಣೆಯನ್ನು ಕೇಳಲು ಕೊಠಡಿಯೊಳಗೆ ಬಂದರು. 'ಯೂಸಫ್, ನೀನೇನು ಮಾಡಿದೆ?'

'ಏನೂ ಇಲ್ಲ, ಅಪ್ಪಾ'.

'ನಿಮ್ಮ ಉಪಾಧ್ಯಾಯಿನಿ ಒಳಗೆ ಉಳಿಸಿಕೊಂಡಾಗ ಏನೂ ಇಲ್ಲದೇ ಇರುವುದು ಸಾಧ್ಯವಿಲ್ಲ'.

'ಅವರು ನನ್ನನ್ನು ನಿಜವಾಗಿ ಒಳಗೆ ಉಳಿಸಿಕೊಳ್ಳಲಿಲ್ಲ, ಅವರು ಹಾಗೇ

ನನ್ನೊಡನೆ ಮಾತಾಡಲು ಇಷ್ಟಪಟ್ಟರು.'

'ಓ, ಯಾವುದರ ಬಗ್ಗೆ?'

'ಯಾವುದರ ಬಗ್ಗೆ ಅಂದರೆ........ ಅಂದರೆ......'

'ಹೇಳು, ಅದೇನೆಂದು ಹೇಳು, ನಿನ್ನ ಉಪಾಧ್ಯಾಯಿನಿ ನಿನ್ನೊಡನೆ ಯಾವ ವಿಷಯವಾಗಿ ಮಾತನಾಡಲು ಇಷ್ಟಪಟ್ಟರು?'ಏನು ಹೇಳಬೇಕೆಂದು ಯೂಸಫ್ ಯೋಚಿಸಲಾರಂಭಿಸಿದನು, ಅವನು ತಂದೆಯ ಮುಖವನ್ನು ನೋಡಿ, ತಾನು ನಿಜ ಹೇಳಿದರೆ ಉತ್ತಮ ಎಂದು ತಿಳಿದುಕೊಂಡನು.

'ಉಪಾಧ್ಯಾಯಿನಿ ನಾನು ಯಾವ ಬಗ್ಗೆ ಚಿಂತಿತನಾಗಿದ್ದೇನೆ ಎಂಬುದನ್ನು ತಿಳಿದುಕೊಳ್ಳಲು ಇಷ್ಟಪಟ್ಟರು. ನನಗೆ ತರಗತಿಯಲ್ಲಿ ಯಾವ ಪ್ರಶ್ನೆಗೂ ಉತ್ತರ ಹೇಳಲಾಗಲಿಲ್ಲ.'

'ಏಕೆ ಆಗಲಿಲ್ಲ? ಅಷ್ಟಕ್ಕೂ ನಿನಗೆ ಏನು ತೊಂದರೆ ಇದೆ? ನಿನಗೆ ಫ್ಲಾಟಿನಲ್ಲಿ ಇರಲು ಇಷ್ಟವಿಲ್ಲವೇ?'

ಯೂಸಫ್ ಹೆದರಿದ್ದ, ತನ್ನ ತಂದೆ ಮತ್ತು ಉಪಾಧ್ಯಾಯಿನಿ ಇಬ್ಬರೂ ಅವನ ಚಿಂತೆಗೆ ಕಾರಣ ಫ್ಲಾಟ್ ಎಂಬುದಾಗಿ ತಿಳಿದಿರುವುದು ಅವನಿಗೆ ಆಶ್ಚರ್ಯವೆನಿಸಿತು. ಆದರೆ ಒಂದು ವಿಧದಲ್ಲಿ ಅದು ನಿಜವೂ ಆಗಿತ್ತು. ಈ ಫ್ಲಾಟಿಗೆ ಬರದಿದ್ದರೆ ಪೂಸಿಗೆ ಏನೂ ಸಮಸ್ಯೆ ಇರಲಿಲ್ಲ. ತಮ್ಮ ಹಳೆಯ ಮುರುಕಲು ಮನೆಗಿಂತ ಈ ಹೊಸ ಸೊಗಸಾದ ಫ್ಲಾಟಿನಲ್ಲಿ ವಾಸಮಾಡುವುದು ಮನೆಯವರಿಗೆ ಎಲ್ಲರಿಗೂ ಇಷ್ಟವಾಗಿತ್ತು.

'ನೀನು ನಿನ್ನ ಉಪಾಧ್ಯಾಯಿನಿಯರಿಗೇನು ಹೇಳಿದೆ? ಏನು ಕಾರಣ ಕೊಟ್ಟೆ?' ತಂದೆ ಅವನಿಗೆ ಉತ್ತರ ಕೊಡಲು ಅವಕಾಶ ಕೊಡಲಿಲ್ಲ, 'ಏನು ಚಿಂತೆ ಉಂಟುಮಾಡುತ್ತಿದೆ ಎಂದು ಹೇಳಿದೆ?'

'ಪೂಸಿ'.

'ಏನು?'.

'ಪೂಸಿ'.

'ನೀನು ಪೂಸಿ ಬಗ್ಗೆ ಯೋಚಿಸುತ್ತಿರುವುದರಿಂದ, ಶಾಲೆಯಲ್ಲಿ ಅಭ್ಯಾಸ ಮಾಡಲು ಆಗುತ್ತಿಲ್ಲವೇ? ಪೂಸಿಯನ್ನು ಹುಡುಕಲು ಎಲ್ಲಾ ಪ್ರಯತ್ನ ಮಾಡುತ್ತಿದ್ದೇನೆ ಎಂಬುದು ನಿನಗೆ ಗೊತ್ತಿದೆ. ಅದಕ್ಕೆ ಎಲ್ಲಿಂದಲೋ ಆಹಾರ ಸಿಗುತ್ತಿರಬೇಕು, ಇಲ್ಲದೆ ಹೋದಲ್ಲಿ ಅದು ಮನೆಗೆ ಖಂಡಿತ ಬರುತ್ತಿತ್ತು.'

'ಅಪ್ಪಾ, ಪೂಸಿ ಅಜ್ಜಿಯ ಹಳೆಯ ಮನೆಯಲ್ಲಿದೆ'.

'ನಿನಗೆ ಹೇಗೆ ಗೊತ್ತು?'

'ನಾನೇ ಅದನ್ನು ಅಲ್ಲಿ ಬಿಟ್ಟೆ, ನಾನು ಅದನ್ನು ಅಲ್ಲಿ ನೋಡಿಕೊಳ್ಳುತ್ತಿದ್ದೇನೆ.'

'ನೀನು...' ತಂದೆ ಕೋಪಿಸಿಕೊಂಡಂತೆ ಕಂಡರು, ಆದರೆ ಯೂಸಫ್‌ಗೆ ಇನ್ನು

ಹೆದರಿಕೆ ಇರಲಿಲ್ಲ. ಈಗ ಅವನು ಅವರಿಗೆ ತನ್ನ ಗುಟ್ಟನ್ನು ತಿಳಿಸಿದ್ದನು, ನಿಜವನ್ನು ಹೇಳಿದ್ದ. ಅವನಿಗೆ ಮನಸ್ಸಿನ ಭಾರ ಹಗುರವಾಗಿತ್ತು. ತಂದೆ ಕೂಡ ಶಾಂತರಾದರು. 'ನಾವು ನಾಳೆ ಅವುಗಳಿಗೆ ವ್ಯವಸ್ಥೆ ಮಾಡಬೇಕು' , ಎಂದು ಹೇಳಿದರು.

'ಪೂಸಿಗೆ ಮರಿಗಳಿವೆ – ಮೂರು'.

ತಂದೆ ಇನ್ನೇನನ್ನಾದರೂ ಹೇಳುವ ಮೊದಲು ಟೀನಾ ಅವರ ಕಡೆ ನುಗ್ಗಿ ಬಂದು, ಅವರ ತೋಳನ್ನು ಹಿಡಿದು ಎಳೆಯುತ್ತಾ, 'ಅಪ್ಪಾ, ದಯವಿಟ್ಟು ಅವುಗಳನ್ನು ನೋಡಲು ಹೋಗೋಣ' ಎಂದಳು.

ತಾಯಿ ಕೂಡಲೇ ಸ್ವಲ್ಪ ಹಾಲನ್ನು ತರಲು ಒಳಗೆ ಹೋದಳು. ಸ್ವಲ್ಪ ಹೊತ್ತಿನಲ್ಲಿ ನಾಲ್ವರೂ ಅಜ್ಜಿಯ ಹಳೆ ಮನೆಗೆ ಹೋದರು. ಅವರುಗಳನ್ನು ನೋಡಿದಾಗ ಬೆಕ್ಕು ಸಂತೋಷದಿಂದ 'ಮಿಯಾಂ' ಎಂದು ಸ್ವಾಗತಿಸಿತು. ಮಕ್ಕಳಿಬ್ಬರೂ ಹಾಗೂ ತಂದೆ-ತಾಯಿ ಪೂಸಿ ಹಾಗೂ ಅದರ ಮರಿಗಳಿಗಾಗಿ ತುಂಬಾ ಸಂಭ್ರಮಪಟ್ಟರು.

ಯೂಸಫ್ ಬೈಗಳು ಪ್ರಾರಂಭವಾಗಬಹುದೆಂದು ಕಾದಿದ್ದನು. ಆದರೆ ಹಾಗೆ ಆಗಲಿಲ್ಲ. ಮನೆಗೆ ಹೋಗುವ ದಾರಿಯಲ್ಲಿ ತಂದೆ ಮೌನವಾಗಿದ್ದರು. ಫ್ಲಾಟಿಗೆ ವಾಪಸು ಹೋದ ಮೇಲೆ ಮಾತ್ರ ಅವರು ಹೇಳಿದರು, "ನಾವೀಗ ನಾಲ್ಕು ಬೆಕ್ಕುಗಳನ್ನು ನೋಡಿಕೊಳ್ಳಬೇಕಾಗುವುದು".

'ಅಪ್ಪಾ ಕಡೇ ಪಕ್ಷ ಒಂದು ಮರಿಯನ್ನಾದರೂ ನಾವು ಇಟ್ಟುಕೊಳ್ಳಬಾರದೇ?'

'ಇಲ್ಲ, ಟೀನಾ, ನಿನಗೆ ನಿಯಮಗಳು ಗೊತ್ತಿದೆ. ಆದರೆ ಅದಕ್ಕೆ ಆಹಾರ ಹಾಕಲು ಪ್ರತಿನಿತ್ಯ ನಾವು ಹೋಗುವೆವು.'

ತಂದೆ ಮಾತನ್ನು ನಡೆಸಿಕೊಟ್ಟರು. ಪ್ರತಿನಿತ್ಯ ಮನೆಯವರು ಪೂಸಿ ಮತ್ತು ಅದರ ಮರಿಗಳನ್ನು ನೋಡಲು ಹೋಗುತ್ತಿದ್ದ ಸಮಯ ಅತ್ಯಂತ ಸಂತಸದ ಸಮಯವಾಗಿರುತ್ತಿತ್ತು. ಅವಕ್ಕೆ ಯಾವಾಗ ಮನೆ ಹುಡುಕಲಾಗುವುದು ಎಂಬುದರ ಬಗ್ಗೆ ಯೂಸಫ್ ಹೆದರಿದನು. ಆದರೆ ಅದು ಬೇಗ ಆಗಬೇಕೆಂದು ಅವನಿಗೆ ಗೊತ್ತಿತ್ತು. ಬೆಕ್ಕಿನ ಮರಿಗಳು ಬೇಗ ಬೇಗ ಬೆಳೆಯುತ್ತಿದ್ದುವು-ಆಗಲೇ ಅವು ತಾಯಿಯಂತೆಯೇ ಸುಂದರವಾಗಿದ್ದವು- ಮತ್ತು ಆ ಉಗ್ರಾಣ ಅವುಗಳಿಗೆ ತುಂಬಾ ಚಿಕ್ಕದಾಗಿತ್ತು.

ಎಲ್ಲಾ ಬೆಕ್ಕುಗಳಿಗೂ ಮನೆಗಳನ್ನು ನೋಡಿರುವುದಾಗಿ ತಂದೆ ಅವರುಗಳಿಗೆ ಹೇಳಿದಾಗ, ಟೀನಾ ಅತ್ತಳು. ಯೂಸಫ್‌ಗೆ ಕೂಡ ಅಳಬೇಕೆಂದೆನಿಸಿತು.

'ಪೂಸಿ ಮತ್ತು ಅದರ ಮರಿಗಳನ್ನು ಹೊಸ ಮನೆಗಳಿಗೆ ಕರೆದುಕೊಂಡು ಹೋಗುವಾಗ, ನೀವೂ ನನ್ನ ಜೊತೆ ಬರಲು ಇಷ್ಟ ಪಡುವಿರಾ?'

'ಟೀನಾ ಹೋಗಬಹುದು. ನನಗೆ ಇಷ್ಟವಿಲ್ಲ' ಯೂಸಫ್ ಹೇಳಿದ.



ಭಾನುವಾರ ಪೂಸಿ ಮತ್ತು ಅದರ ಮರಿಗಳನ್ನು ತೆಗೆದುಕೊಂಡು ಹೋದಾಗ, ಯೂಸಫ್ ಫ್ಲಾಟನಿಂದ ಹೊರಗೆ ಇದ್ದನು. ಅವನು ಮನೆಯ ಬಡಾವಾಣೆಯ ಸುತ್ತ ಸುತ್ತಾಡಿದನು. ಪೂಸಿ ಹೋಗುವುದು, ಟೀನಾ ಅಳುವುದು, ಇದನ್ನು ನೋಡಲು, ಕೇಳಲು ಇಷ್ಟವಿರಲಿಲ್ಲ. ತಾನು ಇನ್ನು ಮುಂದೆ ತನ್ನ ಸಾಕುಪ್ರಾಣಿಗಳನ್ನು ನೋಡಲಾಗುವುದಿಲ್ಲವಲ್ಲಾ ಎಂದು ಅವನಿಗೆ ದುಃಖವಾಯಿತು. ಆದಾಗ್ಯೂ, ಫ್ಲಾಟಿನಲ್ಲಿ ವಾಸಿಸುವವರು ಸಾಕುಪ್ರಾಣಿಗಳನ್ನು ಇಟ್ಟುಕೊಳ್ಳಬಾರದುದಕ್ಕಾಗಿ ಸಂತೋಷಗೊಂಡನು. ಈಗ ಯಾರೂ ಸಾಕುಪ್ರಾಣಿಗಳನ್ನು ಇಟ್ಟುಕೊಳ್ಳುವಂತಿರಲಿಲ್ಲ. ತನ್ನ ಪೂಸಿಯ ಜಾಗವನ್ನು ಯಾವ ಪ್ರಾಣಿಗಳೂ ಆಕ್ರಮಿಸುವಂತಿರಲಿಲ್ಲ. ಇದಕ್ಕಾಗಿ ಅವನು ಸಂತೋಷಗೊಂಡಿದ್ದ.

ಸಂಜೆಯ ಹೊತ್ತಿಗೆ ಮನೆಗೆ ಹೋಗುವುದು ಒಳ್ಳೆಯದೆಂದು ಯೂಸಫ್ ಯೋಚಿಸಿದನು. ತುಂಬಾ ಹೊತ್ತು ಹೊರಗೆ ಉಳಿದುಕೊಂಡರೆ ತಂದೆ–ತಾಯಿ ಚಿಂತೆಪಡುವರು. ಅವನು ತಮ್ಮ ಫ್ಲಾಟ್ ಇರುವ ಹಂತಕ್ಕೆ ಲಿಫ್ಟ್ ಮುಖಾಂತರ ಮೇಲೆ ಹೋಗಿ ಅವರ ಫ್ಲಾಟ್‌ಗೆ ಹೋಗುವ ದಾರಿಯಲ್ಲಿ ನಡೆದು ಹೋದನು. ಉಳಿದವರು ಮನೆಯಲ್ಲಿದ್ದರು. ಅವನು ಬಾಗಿಲ ಬಳಿ ಬಂದಾಗ ಎಲ್ಲರೂ ಮಾತನಾಡುತ್ತಿರುವುದು ಕೇಳಿಸಿತು. ಅವನು ಒಳಗೆ ಬಂದಾಗ, ಅವರು ಅವನ ಕಡೆ ತಿರುಗಿದರು. ಯಾರೂ ಮಾತನಾಡಲಿಲ್ಲ. ಆದರೆ ತನಗಾಗಿ ಅವರು ದುಃಖಿತರಾಗಿದ್ದಾರೆಂಬುದು ಅವನಿಗೆ ಗೊತ್ತಿತ್ತು.

ಅವನು ನೇರವಾಗಿ ತನ್ನ ಕೊಠಡಿಗೆ ಹೋದನು. ಬಾಗಿಲ ಬಳಿ ಹಾಗೇ ನಿಂತುಕೊಂಡು ಎದುರಿಗೆ ದೃಷ್ಟಿಸಿ ನೋಡಿದ್ದೇ ತಡ, ಸಂತೋಷದಿಂದ ಚೀರಿದನು.

'ಪೂಸಿ ! ಎಷ್ಟು ಸುಂದರವಾಗಿದೆ !'

ಅಲ್ಲಿ ಗೋಡೆಯ ಮೇಲೆ ತಮ್ಮ ತಂದೆಯವರು ತೆಗೆದಿದ್ದ ಪೂಸಿ ಮತ್ತು ಅದರ ಮುದ್ದಾದ ಪುಟಾಣಿ ಮರಿಗಳ ಪೂರಾ ಆಕಾರದ ಛಾಯಾಚಿತ್ರವನ್ನು ತೂಗುಹಾಕಲಾಗಿತ್ತು. ಅದರ ಹಿಂದೆ ಪ್ರತಿಯೊಂದು ಬೆಕ್ಕಿನ ಹೊಸ ಮನೆಯ ವಿಳಾಸಗಳಿದ್ದುವು. ಅವನಿಗೆ ಬೇಕಾದಾಗ ಅಲ್ಲಿಗೆ ಅವುಗಳನ್ನು ನೋಡಲು ಹೋಗಬಹುದಾಗಿತ್ತು; ಆ ಸುಂದರವಾದ ಚಿತ್ರ ಅವನಿಗೆ ಯಾವಾಗಲೂ ಪೂಸಿ ಮತ್ತು ಅದರ ಮರಿಗಳನ್ನು ಜ್ಞಾಪಿಸುತ್ತಿತ್ತು. ಅವನು ಎಂದೆಂದಿಗೂ ಅವುಗಳನ್ನು ತನ್ನ ಜೊತೆಯೇ ಇರಿಸಿಕೊಂಡಿದ್ದ.

ಚಿತ್ರಗಳು: ಚಿನ್ ಆಯ್ ಟೊ

ಶ್ರೀಲಂಕಾ

# ಮನೆಯಷ್ಟು ದೊಡ್ಡ ಲಾಂದ್ರ

ಸಿಬಿಲ್ ವೆಟ್ಟಸಿಂಘೆ

ಮೇ ತಿಂಗಳಲ್ಲಿ ಪೂರ್ಣಚಂದ್ರ ವಿಶೇಷ ಕಾಂತಿ ಹಾಗೂ ತೇಜಸ್ಸಿನಿಂದ ಪ್ರಕಾಶಿಸುವಂತೆ ಕಾಣಿಸುವಾಗ ವೈಶಾಖ ಉತ್ಸವ ನಡೆಯುತ್ತದೆ. ಇದು ಭಗವಾನ್ ಬುದ್ಧನ ಗೌರವಕ್ಕಾಗಿ ಆಚರಿಸುವ ಉತ್ಸವ; ಅವನನ್ನು ಗೌರವಿಸಲು ಜನಗಳು ದೇವಾಲಯಗಳಲ್ಲಿ ಸೇರಿದಾಗ ಅವರ ಹೃದಯಗಳು ಉತ್ಸಾಹಭರಿತವಾಗಿರುತ್ತವೆ. ಹಾಲು ಮತ್ತು ಅಕ್ಕಿಯ ಪಾಯಸ ಹಾಗೂ ಗಂಧದ ಕಡ್ಡಿಗಳನ್ನು ಪೂಜೆಗಾಗಿ ತರುತ್ತಾರೆ. ರಾಶಿ ರಾಶಿ ಹೂವುಗಳನ್ನು ತರುತ್ತಾರೆ, ಅವುಗಳನ್ನು ಯಜ್ಞವೇದಿಕೆಯ ಮೇಲಿಟ್ಟು ಭಗವಾನ್ ಬುದ್ಧನ ಉಪದೇಶಗಳನ್ನು ಮತ್ತೆ ಮತ್ತೆ ಜಪಿಸುತ್ತಾರೆ.

'ಓ, ಭಗವಾನ್, ಈ ಸುಂದರ ಹೂಗಳು ಒಂದು ದಿನ ಬಾಡಿಹೋಗುವಂತೆ



ನಮ್ಮ ಜೀವನವೂ ಒಂದು ದಿನ ನಂದಿಹೋಗುವುದು...'

ಜನರು ಆ ಪವಿತ್ರ ಉತ್ಸವದ ಮೊದಲ ದಿನ ಧ್ಯಾನ ಮಾಡುತ್ತಾರೆ. ಮಧ್ಯಾಹ್ನದಿಂದ ಮರುದಿನ ಸೂರ್ಯ ಉದಯವಾಗುವವರೆಗೆ ಉಪವಾಸವನ್ನು ಆಚರಿಸುತ್ತಾರೆ. ಇತರರು ಬುದ್ಧನ ಉಪದೇಶಗಳ ಬಗ್ಗೆ ಮಾಡುವ ಧರ್ಮ ಪ್ರವಚನಗಳನ್ನು ಕೇಳುತ್ತಾರೆ. ಇನ್ನು ಕೆಲವರು ತಮಗಿಂತ ಕಡಿಮೆ ಅದೃಷ್ಟಶಾಲಿಗಳಾದವರಿಗೆ ಭಿಕ್ಷೆಯನ್ನು ನೀಡಿ, 'ವೇಸಕ್' ಉತ್ಸವದಲ್ಲಿ ಬಡವರೂ ಕೂಡಾ ಅಪರೂಪವಾದ ಉತ್ಸವವನ್ನು ಸಂತೋಷದಿಂದ ಅನುಭವಿಸುವಂತೆ ಮಾಡುವರು.

ಮೊದಲನೆಯ ದಿನ ಸೂರ್ಯ ಮುಳುಗಿದ ಮೇಲೆ ಮನೆಗಳಲ್ಲಿ ಎಲ್ಲೆಲ್ಲೂ ಬಣ್ಣ ಬಣ್ಣದ ದೀಪಗಳು ಮಿನುಗಲು ಪ್ರಾರಂಭಿಸುವುವು. 'ವೇಸಕ್' ಉತ್ಸವದಲ್ಲಿ ಭಗವಾನ್ ಬುದ್ಧನ ಜೀವನದ ಮೂರು ಸನ್ನಿವೇಶಗಳಾದ ರಾಜಕುಮಾರ ಸಿದ್ಧಾರ್ಥನ ಜನ್ಮ ದಿನ, ಜ್ಞಾನೋದಯವಾದ ದಿನ ಹಾಗೂ ಅವನು ನಿರ್ವಾಣವನ್ನು ಅಥವಾ ಶಾಶ್ವತ ಶಾಂತಿಯನ್ನು ಪಡೆದ ದಿನಗಳ ಜ್ಞಾಪಕಾರ್ಥ ಈ ಲಾಂದ್ರಗಳನ್ನು ಬೆಳಗಿಸುತ್ತಾರೆ.

ಈ ರೀತಿಯಾಗಿ ಗಾಢವಾದ ಭಕ್ತಿಯಿಂದ ಬುದ್ಧನನ್ನು ನೆನೆಸುತ್ತಾರೆ. ಜನಗಳು ಸಂತೋಷಪಡುತ್ತಾರೆ. ಅವನನ್ನು ಪೂಜಿಸುತ್ತಾರೆ. ಅವನ ಉಪದೇಶಗಳನ್ನು ಅನುಸರಿಸಲು ಪರಿಶ್ರಮಪಡುತ್ತಾರೆ.

ಹೀಗೇ 'ವೇಸಕ್'ನ ಸಿದ್ಧತೆಗಾಗಿ ಒಬ್ಬ ಚಿಕ್ಕ ಹುಡುಗ ಲಾಂದ್ರಗಳನ್ನು ತಯಾರಿಸುತ್ತಿದ್ದನು. ಅವನು ತನ್ನ ಅಜ್ಜಿಯ ತರಕಾರಿಯ ತೋಟದ ಸೋರೆಕಾಯಿಗೆ ಚಪ್ಪರ ಹಾಕಲು ಕೆಲವು ಬಿದಿರಿನ ದೆಬ್ಬೆಗಳನ್ನು ಕೊಂಡಿದ್ದ. ಅವನ್ನೇ ಒಟ್ಟಾಗಿ ಕಟ್ಟಿ ಲಾಂದ್ರಕ್ಕೆ ವಜ್ರದ ಆಕಾರದ ಒಂದು ಚೌಕಟ್ಟನ್ನು ತಯಾರಿಸುವುದರಲ್ಲಿ ತೊಡಗಿದ್ದನು. ಹೋದ ವರ್ಷ ತಾನು ಮತ್ತು ತನ್ನ ಅಜ್ಜಿ ನೆರೆಹೊರೆಯವರೊಡನೆ ಉತ್ಸವದ ದೀಪಾಲಂಕಾರಗಳನ್ನು ನೋಡಲು ಹೋದಾಗ ಅಲ್ಲಿ ತಾನು ನೋಡಿದ್ದ ಲಾಂದ್ರಗಳಂತೆ ದೊಡ್ಡ ದೊಡ್ಡ ಲಾಂದ್ರಗಳನ್ನು ಮಾಡಲು ಅವನು ಇಷ್ಟಪಟ್ಟನು. ಕೆಲವು ಲಾಂದ್ರಗಳು ಮನೆಯಷ್ಟೇ ದೊಡ್ಡದಾಗಿ ಕಂಡವು. ಅವನ್ನು ಮರೆಯಲು ಸಾಧ್ಯವಾಗಲಿಲ್ಲ.

'ವೇಸಕ್' ಪ್ರಾರಂಭವಾಗುವುದಕ್ಕೆ ಈಗ ಕೇವಲ ಇಪ್ಪತ್ತು ದಿನಗಳು ಮಾತ್ರ ಉಳಿದಿದ್ದುವು. ಎಲ್ಲಾ ಹಳ್ಳಿಯ ಹುಡುಗರು, ಚಿಕ್ಕವರು, ದೊಡ್ಡವರು ಸಿದ್ಧತೆಗಳನ್ನು ಮಾಡುವುದರಲ್ಲಿ ತೊಡಗಿದ್ದರು. 'ವೇಸಕ್'ನ ಮೊದಲ ರಾತ್ರಿಯನ್ನು ಝುಗಝುಗಿಸುವಂತೆ ಮಾಡಲು ಕುಟುಂಬ ವರ್ಗದವರು ಗುಂಪು ಗುಂಪುಗಳಾಗಿ ಚಿಕ್ಕ ಲಾಂದ್ರಗಳ ಗೊಂಚಲನ್ನು ತಯಾರಿಸುತ್ತಿದ್ದರು. ಚಿಕ್ಕ ಹುಡುಗರು ವಿಶೇಷವಾಗಿ ತಮ್ಮ ಮನೆಯ ಲಾಂದ್ರಗಳೇ ಹಳ್ಳಿಯಲ್ಲೆಲ್ಲಾ ಉತ್ತಮವಾದ್ದಾಗಿರಬೇಕೆಂದು



ಇಷ್ಟಪಡುತ್ತಿದ್ದರು. ಆದರೆ ಮನೆಯಷ್ಟು ದೊಡ್ಡದಾದ ಲಾಂದ್ರವನ್ನು ಮಾಡಬೇಕೆಂದು ಇಷ್ಟಪಡುತ್ತಿದ್ದ ಹುಡುಗ ಇವನೊಬ್ಬನೇ. ಅವನಿಗೆ ಸಹಾಯ ಮಾಡಲು ಸೋದರರಾಗಲಿ, ಸೋದರಿಯರಾಗಲಿ ಯಾರೂ ಇರಲಿಲ್ಲ. ಅವನ ಜೊತೆ ಮಾಳಿಗೆ ಮನೆಯಲ್ಲಿ ಅವನ ಮುದಿ ಅಜ್ಜಿಯೊಬ್ಬಳೇ ಇದ್ದದ್ದು.

ಅಜ್ಜಿ ಅವನನ್ನು ತುಂಬಾ ಪ್ರೀತಿಸುತ್ತಿದ್ದಳು. ಅವನು ಇನ್ನೂ ಚಿಕ್ಕ ಮಗುವಾಗಿದ್ದಾಗಲೇ ಅವಳೊಡನೆ ವಾಸಿಸಲು ಬಂದಿದ್ದನು. ಅವನನ್ನು ಅವಳು ತುಂಬಾ ಪ್ರೀತಿ ಮತ್ತು ಎಚ್ಚರಿಕೆಯಿಂದ ಬೆಳೆಸಿದ್ದಳು. ಇನ್ನೂ ಅವನನ್ನು 'ಪತಿಯಾ'- ಅಂದರೆ ಮಗು–ಎಂದೇ ಕರೆಯುತ್ತಿದ್ದಳು.

ಅಜ್ಜಿ ಮನೆಯ ಹಿಂದಿನ ಒಂದು ಸಣ್ಣ ತೋಟದಲ್ಲಿ ತರಕಾರಿಗಳನ್ನು ಬೆಳೆಸಿ, ಜೀವನ ಸಾಗಿಸುತ್ತಿದ್ದಳು. ತನಗೆ ಸಹಾಯ ಮಾಡುವಷ್ಟು ಪತಿಯಾ ದೊಡ್ಡವನಾದಾಗ ಅವಳು ಸಂತೋಷಗೊಂಡಿದ್ದಳು. ಈಗ ಅವನಿಗೆ ಕೇವಲ ಹತ್ತು ವರ್ಷ ವಯಸ್ಸಾಗಿತ್ತು, ಆದರೆ ಅವನು ಆಗಲೇ ದೊಡ್ಡವರಂತೆ, ಕಳೆ ಕೀಳುತ್ತಾ, ಭೂಮಿ ಅಗತೆ ಮಾಡುತ್ತಾ ಗಿಡಗಳಿಗೆ ನೀರು ಹಾಕುವುದು ಮತ್ತು ಗೊಬ್ಬರವನ್ನು

ಶೇಖರಿಸುವುದು ಮೊದಲಾದ ಕೆಲಸಗಳನ್ನು ಮಾಡುತ್ತಿದ್ದನು. ಶಾಲೆಗೂ ಕೂಡಾ ಹೋಗುತ್ತಿದ್ದನು. ಅಜ್ಜಿಗೆ ಲೆಕ್ಕ ಇಡುವುದರಲ್ಲಿ ಸಹಾಯ ಮಾಡಲೆಂದು ಅವನು ಲೆಕ್ಕವನ್ನು ಕಲಿಯಲು ಇಷ್ಟ ಪಡುತ್ತಿದ್ದನು. ಶಾಲೆಯ ಪುಸ್ತಕಗಳನ್ನು ತನ್ನ ಅಜ್ಜಿಗೆ ಓದಿ ಹೇಳುತ್ತಿದ್ದ. ಪ್ರತಿ ಭಾನುವಾರ, ಬೆಳಿಗ್ಗೆ ಬೇಗನೆ ಅವರು ಸಂತೆಗೆ ಹೋಗುತ್ತಿದ್ದರು. ಅವರೊಂದು ಸುಖೀ ಜೋಡಿ. ಸದಾ ಕೆಲಸದಲ್ಲಿ ತೊಡಗಿರುವ ಅಜ್ಜಿ ಮತ್ತು ಅವಳಿಗೆ ನೆರವು ನೀಡುತ್ತಿದ್ದ ಪತಿಯಾ.

ಅಜ್ಜಿ ದಿನವೆಲ್ಲಾ ಕೆಲಸ ಮಾಡುತ್ತಿದ್ದಳು, ಪತಿಯಾ ಅಜ್ಜಿಗೆ ನೆರವಾಗುತ್ತಾ ಬೇಸರ ಕಳೆಯುತ್ತಿದ್ದ. ಅವರ ತೋಟದಿಂದ ಪಕ್ಷಿಗಳನ್ನು ಬೆದರಿಸಿ ಓಡಿಸುತ್ತಿದ್ದ. ಅವನು ತನ್ನ ವಿನೋದಕ್ಕಾಗಿ ಗಾಳಿಪಟಗಳು ಮತ್ತು ಬೆದರು ಬಂದೂಕಗಳನ್ನು ಕೂಡಾ ಮಾಡಿದ್ದನು, ಅವಳು ಅವನನ್ನು ಆಗಾಗ್ಗೆ ಚೂಟಿ ಹುಡುಗ ಎನ್ನುತ್ತಿದ್ದಳು. ಅವನು ದೊಡ್ಡ 'ವೇಸಕ್' ಲಾಂದ್ರವನ್ನು ಮಾಡಲು ಪ್ರಾರಂಭಿಸಿದುದನ್ನು ನೋಡಿದಾಗ, "ಇದು ಮನೆಯಷ್ಟು ದೊಡ್ಡದಾಗಿದೆ. ನಾವು ಅದರಲ್ಲಿ ವಾಸ ಮಾಡಬಹುದಲ್ಲವೇ?"ಎಂದಳು.

ಪತಿಯಾ ಪ್ರತಿ ಮಧ್ಯಾಹ್ನ ತನ್ನ ಲಾಂದ್ರ ತಯಾರಿಸುವ ಕೆಲಸ ಮಾಡುತ್ತಿದ್ದನು. ಆಗ ಅಕ್ಕಪಕ್ಕದ ಹುಡುಗರು ನೋಡಲು ಬರುತ್ತಿದ್ದರು. ಕೂಡಲೇ ಅವನ ಅತಿ ದೊಡ್ಡ ಲಾಂದ್ರದ ಸಮಾಚಾರ ದೂರ ದೂರಕ್ಕೆ ಹರಡಿತು. ಎಲ್ಲಾ ಕಡೆಯಿಂದಲೂ ಹುಡುಗರು ಪತಿಯಾನ ಕೆಲಸವನ್ನು ನೋಡಲು ಬರುತ್ತಿದ್ದರು.

'ಅಷ್ಟು ದೊಡ್ಡದನ್ನು ಹೇಗೆ ತೂಗು ಹಾಕಲು ನಿನಗೆ ಸಾಧ್ಯ?'ಎಂದು ಕೇಳಿದರು.

'ನಾನು ಅದನ್ನು ತೂಗುಹಾಕಬೇಕೆಂದೇನೂ ಅಂದುಕೊಂಡಿಲ್ಲ' ಪತಿಯಾ ದೃಢ ವಿಶ್ವಾಸದಿಂದ ಹೇಳಿದನು, 'ನಾನು ಅದನ್ನು ಇಲ್ಲೇ ಇರುವಂತೆ ಬಿಡುತ್ತೇನೆ.'

ಆ ಬಿದಿರಿನ ಚೌಕಟ್ಟು ಆ ಚಿಕ್ಕ ಮಣ್ಣಿನ ನೆಲಗಟ್ಟಿನ ಅವರ ಮನೆಯ ದ್ವಾರಮಂಟಪದಲ್ಲಿ ಇತ್ತು. ಅದು ದೊಡ್ಡದಾಗುತ್ತಾ ದೊಡ್ಡದಾಗುತ್ತಾ ಆ ದ್ವಾರ ಮಂಟಪವನ್ನೇ ಪೂರಾ ಮುಚ್ಚಿಕೊಂಡುಬಿಟ್ಟಿತು. ಅವರು ಮನೆಯೊಳಗೆ ಹೆಬ್ಬಾಗಿಲಿನ ಮುಖಾಂತರ ಹೋಗಲು ಆ ಚೌಕಟ್ಟಿನೊಳಗೆ ನುಸುಳಿಕೊಂಡು ಹೋಗಬೇಕಾಗಿತ್ತು.

'ವೇಸಕ್'ಗೆ ಆರು ದಿನಗಳ ಮೊದಲು, ಪತಿಯಾ ಆ ಲಾಂದ್ರದ ಕೆಲಸವನ್ನು ಮುಗಿಸಿದನು. ಆಗ ಅವನಿಗೊಂದು ಯೋಚನೆ ಹೊಳೆಯಿತು. ಅಷ್ಟು ದೊಡ್ಡ ಲಾಂದ್ರವನ್ನು ಮುಚ್ಚಲು ಬೇಕಾಗುವಷ್ಟು ಕಾಗದವನ್ನು ಹೇಗೆ ತರಲು ಸಾಧ್ಯವಾಗುತ್ತದೆ? ಅದರ ಬಗ್ಗೆ ಯೋಚಿಸುತ್ತಾ ಅವನು ತನ್ನ ಸ್ನೇಹಿತರುಗಳ ಲಾಂದ್ರಗಳು ಹೇಗೆ ಮುಂದುವರಿಯುತ್ತಿವೆ ಎಂಬುದನ್ನು ನೋಡಲು ಹೋದನು, ಅವುಗಳಿಗೆ ಆಗಲೇ ಕೊನೆಯ ಅಲಂಕಾರವನ್ನು ಮಾಡಲಾಗಿತ್ತು. ಅಲಂಕಾರ ಮಾಡಿಕೊಂಡ ಹೆಂಗಸರು ಮದುವೆಗೆ ಹೋಗಲು ಕಾಯುತ್ತಿರುವಂತೆ ಅವುಗಳು ನಿಂತಿದ್ದುವು. ಮನೆಯಲ್ಲಿನ ಖಾಲಿ ಚೌಕಟ್ಟು ಹೆಬ್ಬಾಗಿಲನ್ನು ಮುಚ್ಚಿರುವುದರ ಬಗ್ಗೆ

ಯೋಚಿಸುತ್ತಾ ದುಃಖದಿಂದ ಮನೆಗೆ ಬಂದನು, ಬಾಗಿಲ ಬಳಿ ಇದ್ದ ಚೌಕಟ್ಟು ಇದ್ದ ಒಳ್ಳೆಯ ಬಟ್ಟೆಗಳಿಂದ ಅವಳಿಗೆ ಅಲಂಕಾರ ಮಾಡಿದರೆ ಮಾತ್ರ ಸುಂದರವಾಗಿ ಕಾಣುವ ಒಬ್ಬ ಬಡ ಭಿಕ್ಷುಕಿಯಂತೆ ಅಲ್ಲೇ ಇತ್ತು.

ಆಗ ಮಧ್ಯಾಹ್ನವಾಗಿತ್ತು. ಅಜ್ಜಿಯನ್ನು ಹುಡುಕುತ್ತಾ ಅವನು ಅಡಿಗೆ ಮನೆಗೆ ಹೋದನು. ಅನ್ನದ ತಪ್ಪಲೆ ಒಲೆಯ ಮೇಲಿತ್ತು. ಮುದುಕಿ ಒಲೆ ಉರಿಸುತ್ತಿದ್ದಳು.

'ಅಜ್ಜೀ, ನಾನೊಬ್ಬ ಮೂರ್ಖ', ಅವನು ಪ್ರಾರಂಭಿಸಿದನು.

ಅಜ್ಜಿ ಅವನ ಕಡೆ ತಿರುಗುತ್ತಾ, ಎಂದಳು, 'ಏಕೆ, ನನ್ನ ಚಿನ್ನ?'

ಪತಿಯಾನ ಕಣ್ಣುಗಳಲ್ಲಿ ಕಣ್ಣೀರು ತುಂಬಿ ಬಂತು. ಅವನು ಹೇಳಿದ 'ಲಾಂದ್ರವನ್ನು ಮುಚ್ಚಲು ಸಾಕಷ್ಟು ಕಾಗದ ನಮ್ಮಲ್ಲಿಲ್ಲ'.

'ಓ, ಹೌದು, ಯೋಚಿಸಬೇಡ', ಅಜ್ಜಿ ಹೇಳಿದಳು, 'ತುಂಬಾ ಕಾಗದ ಇದೆ, ಹೆದರಬೇಡ'.

ಪತಿಯಾ ಕಣ್ಣರಳಿಸಿದ. ಆ ಹುಚ್ಚು ಅಜ್ಜಿ ತಾನು ಹೇಳಿದ್ದಕ್ಕೆ ವಿವರಣೆ ಕೊಟ್ಟಳು, 'ನಾಳೆ ಶನಿವಾರ, ನಾವು ಸಿಹಿ ಗೆಣಸುಗಳನ್ನು ಅಗೆದು ತೆಗೆಯೋಣ, ಭಾನುವಾರ ಅವುಗಳನ್ನು ಸಂತೆಯಲ್ಲಿ ಮಾರೋಣ. ಆಮೇಲೆ...' ಅವಳು ನಿಲ್ಲಿಸಿದಳು. ಪತಿಯಾನ ಮುಖ ಹೊಳೆಯಲಾರಂಭಿಸಿತು. ಅವನ ಕೆನ್ನೆಗಳ ಮೇಲೆ ಕಣ್ಣೀರು ಮಿನುಗುಟ್ಟಿತು, ಮತ್ತೆ ನಗು ಹೊರಗೆ ಬಂತು. 'ಆಮೇಲೆ ಮನೆಗೆ ನಾವು ಕಾಮನ ಬಿಲ್ಲನ್ನು ತರುವೆವು!' ಅವಳೂ ಹಾಡಿದಳು.

ಆದ್ದರಿಂದ ಅವರು ಶನಿವಾರ ಭಾರೀ ಸುಗ್ಗಿಯಂತೆ ಸಿಹಿ ಗೆಣಸನ್ನು ಅಗೆದು ತೆಗೆದು, ಭಾನುವಾರ ಒಳ್ಳೆಯ ಬೆಲೆಗೆ ಮಾರಿದರು. ಸಂತೆಯನ್ನು ಬಿಟ್ಟಮೇಲೆ, ಪತಿಯಾ ತುಂಬಾ ಸಂತೋಷಗೊಂಡನು, ಆಗಲೇ ಅವರು ವೇಸಕ್ ರಾತ್ರಿಯಲ್ಲಿ ಅವನ ಲಾಂದ್ರ ಎಲ್ಲವುಗಳಿಗಿಂತ ಎದ್ದು ಕಾಣುವುದು ಎಂಬುದನ್ನು ಊಹಿಸಕೊಂಡು ಅಜ್ಜಿಯ ಕಡೆ ನೋಡಿದಾಗ, ಅವಳ ಮುಖದ ಮೇಲೂ ನಗು ಕಣ್ಣುಮುಚ್ಚಾಲೆಯ ಆಟವನ್ನು ಆಡುತ್ತಿದೆ ಎಂಬುದು ಕಾಣಿಸಿತು.

ಪೇಟೆಯ ಅಂಗಡಿಗಳು ವೇಸಕ್ ಪ್ರಯುಕ್ತ ತಮ್ಮ ವಿಶೇಷ ಸಾಮನುಗಳನ್ನು ಮೊದಲೇ ಗೊತ್ತುಪಡಿಸಿದ್ದ ಬಣ್ಣಗಳಲ್ಲಿ ಪ್ರದರ್ಶಿಸುತ್ತಿದ್ದುವು. ಪ್ರಕಾಶಮಾನವಾದ ಬಣ್ಣದ ಕಾಗದಗಳು ಮತ್ತು ಮೆರುಗಿನ ಬಟ್ಟೆಗಳು ಮತ್ತು ತೋರಣಗಳು, ಕಾಗದದ ಟೋಪಿಗಳು ಮತ್ತು ಮುಖವಾಡಗಳು, ಬಟ್ಟೆ, ಬಾವುಟಗಳು, ಕಾಗದದ ಬಾವುಟಗಳು ಮತ್ತು ರಾಶಿ ರಾಶಿ ಬಕೆಟ್ ಆಕಾರದ ಲ್ಯಾಂದ್ರಗಳು.

ಪತಿಯಾ ಹೆಮ್ಮೆಯಿಂದ ಪೇಟೆಯಲ್ಲಿ ನಡೆದನು ಮತ್ತೆ ಲಾಂದ್ರವನ್ನು ಅಲಂಕರಿಸುವುದಕ್ಕೆ ತನಗೆ ಬೇಕಾದ್ದನ್ನೆಲ್ಲಾ ಕೊಂಡುಕೊಂಡನು. ಆಮೇಲೆ ಅವರು ಮನೆಗೆ ಬಂದರು.

ಊಟವಾಗುತ್ತಲೇ, ಅಜ್ಜಿ ಒಂದು ಸಣ್ಣ ನಿದ್ರೆಗಾಗಿ ಮಲಗಿದಳು, ಅದು

ಅವಳಿಗೆ ಆಯಾಸದ ದಿನವಾಗಿತ್ತು. ಪತಿಯಾ ಹೊಸ ಮೃದುವಾದ ಬಣ್ಣದ ಕಾಗದಗಳ ಹಾಳೆಗಳನ್ನು ಹೊರಗೆ ತೆಗೆದನು. ಆದರೆ ಹೇಗೋ ಅವನಿಗೆ ಮೊದಲ ಸಲ ತಾನೇ ಕತ್ತರಿಸುವುದು ಸಾಧ್ಯವಾಗಲಿಲ್ಲ. ಏನಾದರೂ ತಪ್ಪಾಗುವುದೆಂದು ಹೆದರಿದನು, ತಾನು ತಪ್ಪನ್ನು ಮಾಡಿ ಕಾಗದವನ್ನು ಹಾಳುಮಾಡಿದರೆ, ಪುನಃ ಹೆಚ್ಚಿಗೆ ಕೊಂಡುಕೊಳ್ಳುವುದು ಸಾಧ್ಯವಾಗುವುದಿಲ್ಲವೆಂಬುದು ಅವನಿಗೆ ಗೊತ್ತಿತ್ತು. ವೇಸಕ್‌ಗೆ ಕೇವಲ ನಾಲ್ಕು ದಿನಗಳು ಉಳಿದಿದ್ದುವು. ಅವನು ಮತ್ತೆ ಮತ್ತೆ ಯೋಚಿಸುತ್ತಲೇ ಇದ್ದನು.

ಅಜ್ಜಿ ಎದ್ದ ಮೇಲೆ ತನ್ನ ನಿತ್ಯದ ಕೆಲಸ ಮತ್ತು ಸಿದ್ಧತೆಗಳಿಗಾಗಿ ಹೊರಡುತ್ತಿದ್ದಾಗ, ಲಾಂದ್ರ ಮಾಡುವುದರಲ್ಲಿ ಯಾವ ಸುಧಾರಣೆಯೂ ಆಗದೆ ಇರುವುದನ್ನು ಗಮನಿಸಿದಳು, 'ಪತಿಯಾ, ನೀನು ಬೇಗ ಮಾಡುವುದು ಒಳ್ಳೆಯದು' ಅವಳು ಹೇಳಿದಳು, 'ಇನ್ನು ಹೆಚ್ಚು ಕಾಲ ಉಳಿದಿಲ್ಲ.'

ಕೊನೆಗೆ, ಪತಿಯಾ ತಾನು ಯಾವುದರ ಬಗ್ಗೆ ಚಿಂತಿತನಾಗಿದ್ದೇನೆ ಎಂಬುದನ್ನು ಅವಳಿಗೆ ಹೇಳಿದನು. ತಾವು ಹೆಚ್ಚಿಗೆ ಕಾಗದವನ್ನು ಕೊಳ್ಳಲಾಗುವುದಿಲ್ಲ ಎಂಬುದನ್ನು ಅಜ್ಜಿ ಒಪ್ಪಿಕೊಂಡಳು. ಅವಳು ಸ್ವಲ್ಪ ಕಾಲ ಯೋಚಿಸಿದ ಬಳಿಕ ಕಾಗದವನ್ನು ಕತ್ತರಿಸುವುದರಲ್ಲಿ ಸಹಾಯ ಮಾಡಲು ಒಪ್ಪಿದಳು. ವೇಸಕ್‌ನ ಮೊದಲ ದಿನವೆಲ್ಲಾ ಅವಳು ಧ್ಯಾನ ಮಾಡಲು ಸಾಧ್ಯವಾಗುವಂತೆ ಮೊದಲು ಇಡೀ ಮನೆಯನ್ನು ತೊಳೆದು ಸ್ವಚ್ಛಮಾಡಿ, ಬೂದಿ ಹಾಗೂ ಸೋಪಿನಿಂದ ಅಡಿಗೆ ಪಾತ್ರೆಗಳನ್ನು ಉಜ್ಜಿ ಚಾಪೆಗಳನ್ನು ನೆನೆಸಿ, ತೆಂಗಿನಕಾಯಿ ಜುಂಗಿನಿಂದ ಅವುಗಳನ್ನು ಉಜ್ಜಿ, ಉಡುಪುಗಳು ಮತ್ತು ನಾರು ಬಟ್ಟೆಗಳನ್ನು ಒಗೆದು ವಿಶೇಷ ಹೆಚ್ಚಿನ ಅಡಿಗೆ ಮಾಡಬೇಕಾಗಿತ್ತು.

ಆದ್ದರಿಂದ ಹಬ್ಬಕ್ಕೆ ಹಿಂದಿನ ದಿನದವರೆಗೂ ಅವಳು ಅವನಿಗೆ ಸಹಾಯ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಆದರೆ, ಅವರು ಬೆಳಿಗ್ಗೆ ಬೇಗನೆ ಲಾಂದ್ರದ ಕೆಲಸವನ್ನು ಪ್ರಾರಂಭಿಸಿದರು. ಅದು ಅವರು ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಕಷ್ಟದ ಕೆಲಸವಾಗಿತ್ತು. ವೇಸಕ್ ಲಾಂದ್ರಗಳನ್ನು ಹೇಗೆ ಮಾಡುವುದು ಎಂಬುದನ್ನು ತುಂಬಾ ಹಿಂದೆಯೇ ಅಜ್ಜಿ ಮರೆತುಬಿಟ್ಟಿದ್ದಳು. ಪತಿಯಾ ಕಲಿತೇ ಇರಲಿಲ್ಲ, ಆದರೆ, ಪಟ್ಟಣದ ಲಾಂದ್ರ ಹೇಗೆ ಕಾಣಿಸುತ್ತಿತ್ತು ಎಂಬುದು ಪತಿಯಾಗೆ ಜ್ಞಾಪಕದಲ್ಲಿತ್ತು. ಅಜ್ಜಿ ಹಿಂದಿನ ದಿನಗಳ ಲಾಂದ್ರಗಳ ಬಗ್ಗೆ ಯೋಚಿಸುತ್ತಿದ್ದಳು. ವರುಷಗಳ ಆಚಿನ ಯೋಚನೆಗಳು ಒಂದಕ್ಕೆ ಉರುಳುತ್ತಾ ಹೋದುವು–ಹೂವಿನ ಮಾದರಿಗಳನ್ನು ಕತ್ತರಿಸುವುದು ಸುಲಭವಾದ ಕೆಲಸವಾಗಿತ್ತು. ಉದ್ದವಾದ ನಿರಿಗೆ ಬಾಲಗಳನ್ನು ಕತ್ತರಿಸುವುದು ಎಷ್ಟು ಚೆನ್ನಾಗಿರುತ್ತದೆ!

ಅವರು ಕೆಲಸ ಮಾಡುತ್ತಾ ಹೋದರು. ಆ ಸಣ್ಣ ದ್ವಾರ ಮಂಟಪದಲ್ಲಿ ಲಾಂದ್ರಗಳಿಗೆ ಮತ್ತು ಇಬ್ಬರು ಮನುಷ್ಯರಿಗೆ ಸಾಕಷ್ಟು ಜಾಗ ಇರಲಿಲ್ಲ. ಆದ್ದರಿಂದ

ಅಜ್ಜಿ ಟೌಕಟ್ಟಿನ ಒಳಗೆ ಹೋದಳು ಮತ್ತು ಕಾಗದವನ್ನು ಕತ್ತರಿಸುತ್ತಾ ಕುಳಿತಳು. ಪತಿಯಾ ಹೊರಗಡೆ ಬಂದು ಕುರ್ಚಿಯ ಮೇಲೆ ನಿಂತುಕೊಂಡು ಕಾಗದದ ಚೂರುಗಳನ್ನು ಚೌಕಟ್ಟಿನ ಮೇಲೆ ಅಂಟಿಸಿದನು.

ಸೂರ್ಯ ಮುಳುಗುವುದರೊಳಗೆ ಲಾಂದ್ರ ಇನ್ನೂ ಪೂರ್ಣವಾಗಿರಲಿಲ್ಲ. ಅಜ್ಜಿಯು ಅಡಿಗೆ ಮಾಡಲು ಒಳಗೆ ಹೋದಳು. ಪತಿಯಾ ಇನ್ನೂ ಹೆಚ್ಚಿನ ಆಸಕ್ತಿಯಿಂದ ಕೆಲಸ ಮಾಡಿದನು, 'ನಾಳೆ ವೇಸಕ್‌ನ ಪ್ರಾರಂಭ' 'ಅಜ್ಜಿ ಆ ದಿನವನ್ನು ದೇವಾಲಯದಲ್ಲಿ ಧ್ಯಾನ ಮಡುವುದರಲ್ಲೇ ಕಳೆಯುವಳು'ಎಂದುಕೊಂಡ.

ರಾತ್ರಿ ಊಟವಾದ ಮೇಲೆ, ಅವರು ರಾತ್ರಿಯಲ್ಲಿ ಕೆಲಸ ಮಾಡಿದರು, ಆದರೂ ಅದನ್ನು ಮುಗಿಸಲಾಗಲಿಲ್ಲ. ಒಬ್ಬನೇ ಮೂರನೇ ದಿನ ಲಾಂದ್ರವನ್ನು ಕಾಗದದಿಂದ ಮುಚ್ಚುವ ಕೆಲಸವನ್ನು ಮುಗಿಸಬಲ್ಲೆ, ಇತರ ಅಲಂಕಾರಗಳಿಗೆ ಸಮಯವಿಲ್ಲದೆ ಇದ್ದಾಗ್ಯೂ, ಲಾಂದ್ರದ ಕೆಲಸ ಸಾಕಷ್ಟು ಸುಂದರವಾಗಿ ಕಾಣುತ್ತದೆ, ಎಂದು ಯೋಚಿಸುತ್ತಾ, ಪತಿಯಾ ಸಮಾಧಾನ ಮಾಡಿಕೊಂಡನು. ಆ ರಾತ್ರಿ ತುಂಬಾ ಅಸಂತೋಷದಿಂದಲೇ ಮಲಗಲು ಹೋದನು.

ಪ್ರತಿ ವೇಸಕ್ ದಿನದಂತೆ ಮೂರನೆ ದಿನ ಅಜ್ಜಿ ದೇವಸ್ಥಾನಕ್ಕೆ ಬೆಳಗಿನ ಜಾವದಲ್ಲಿ ಹೊರಡದೆ ಇರುವುದನ್ನು ನೋಡಿದಾಗ ಅವನಿಗಾದ ಆಶ್ಚರ್ಯ ಅಷ್ಟಿಷ್ಟಲ್ಲ. ಪತಿಯಾ ಹೇಳಿದ, 'ಜನಗಳು ಆಗಲೇ ದೇವಾಲಯಕ್ಕೆ ಹೋಗುತ್ತಿದ್ದಾರೆ'.

'ನನಗೆ ಗೊತ್ತು, ಮಗಾ', ಅವಳು ಹೇಳಿದಳು, 'ಆದರೆ ನಾನೊಬ್ಬಳೇ ಈ ವರ್ಷ ಹೋಗುವುದಿಲ್ಲ, ನಾವಿಬ್ಬರೂ ಒಟ್ಟಿಗೆ ಹೋಗೋಣ.'

'ಆದರೆ ನೀನು ಧ್ಯಾನ ಮಾಡಬೇಕು', ಪತಿಯಾ ಹೇಳಿದ.

ಉತ್ತರವಾಗಿ ಅಜ್ಜಿಯು ಆ ಚಿಕ್ಕ ಹುಡುಗನ ಗುಂಡು ತಲೆಯನ್ನು ತನ್ನ ಜೀರ್ಣವಾದ ಎರಡೂ ಕೈಗಳಲ್ಲಿ ಹಿಡಿದುಕೊಂಡು ಹೇಳಿದಳು: 'ಒಬ್ಬ ಒಳ್ಳೆಯ ಅಜ್ಜಿ ಯಾವಾಗಲೂ ತನ್ನ ಕರ್ತವ್ಯವನ್ನು ಮಾಡಬೇಕು.'

ಏರುವ ಸೂರ್ಯನು ತನ್ನ ಮೃದುವಾದ ಬೆಳಕಿನಲ್ಲಿ ಜಗತ್ತನ್ನೆಲ್ಲಾ ಬೆಳಗಿದನು. ಪತಿಯಾ ಮತ್ತು ಅವನ ಅಜ್ಜಿ ದೇವಸ್ಥಾನಕ್ಕೆ ಹೊರಟರು. ಹೂವುಗಳನ್ನು ತೆಗೆದುಕೊಂಡು, ಅಕ್ಕಿಯ ಪಾಯಸ ಮತ್ತು ಧೂಪದ ಕಡ್ಡಿಗಳೊಡನೆ ಹೋಗುತ್ತಿದ್ದ ಜನಗಳ ಪ್ರವಾಹದಲ್ಲಿ ಅವರು ಸಿಕ್ಕಿ ಬಿದ್ದರು. ಅವರು ದೇವಸ್ಥಾನವನ್ನು ತಲುಪಿ ಪೂಜೆಯ ಕಾರ್ಯಕ್ರಮದಲ್ಲಿ ಸೇರಿಕೊಂಡರು, ಮನಃಪೂರ್ವಕವಾಗಿ ಪ್ರಾರ್ಥಿಸಿ ಮನೆಕಡೆ ಹೊರಟರು.

ಆ ದಿನ ಎಷ್ಟೊಂದು ಹರ್ಷೋಲ್ಲಾಸಕರ ಹಾಗೂ ಆನಂದಕರವಾಗಿತ್ತು! ವಾತಾವರಣದಲ್ಲಿ ಉತ್ಸಾಹವಿತ್ತು. ಎಲ್ಲೆಲ್ಲಿಯೂ ಜನಗಳು ವೇಸಕ್ ಅಲಂಕಾರಗಳನ್ನು ಮಾಡುತ್ತಿದ್ದರು. ಲಾಂದ್ರಗಳು ಮೃದುವಾಗಿ ಮತ್ತು ಹಗುರವಾದ ತಂಗಾಳಿಯಲ್ಲಿ ತೂಗಾಡುತ್ತಿದ್ದುವು. ಜೆಲ್ಲಿ ಕಾಗದಗಳ ಪರ ಪರ ಶಬ್ದ ಕೇಳಿಸುತ್ತಿತ್ತು. ಪತಿಯಾ

ಆ ಅಲಂಕಾರದ ಕಡೆ ದಿಟ್ಟಿಸಿ ನೋಡುತ್ತಿದ್ದ.

ಅಜ್ಜಿ ಬೇಗ ಬೇಗ ಹೆಜ್ಜೆ ಹಾಕಿದಳು. ಅವರು ಮನೆಗೆ ಹೋಗುತ್ತಲೇ ಅವನನ್ನು ಬೆಳಗಿನ ಉಪಾಹಾರಕ್ಕಾಗಿ ಅವಸರ ಪಡಿಸಿದಳು. ಬಳಿಕ ಅವಳು ಅರ್ಧ ಮಾಡಿದ ಲಾಂದ್ರದೊಳಗೆ ಹೋದಳು. ಅವರಿಬ್ಬರೂ ಕೆಲಸವನ್ನು ಮತ್ತೆ ಕೈಗೆತ್ತಿಕೊಂಡರು.

ಮಧ್ಯಾಹ್ನದ ಹೊತ್ತಿಗೆ ಲಾಂದ್ರ ಒಂದು ಸುಂದರ ಕೃತಿಯಾಗಿ ಬದಲಾಗುತ್ತಿತ್ತು. ರಸ್ತೆಯಲ್ಲಿ ಹೋಗುವವರು ಪತಿಯಾ ಮಾತ್ರ ಕೆಲಸಮಾಡುತ್ತಿರುವುದನ್ನು ನೋಡಬಹುದಾಗಿತ್ತು. ಅವನು ಒಬ್ಬನೇ ಎಷ್ಟು ಬುದ್ಧಿವಂತ ಎಂದುಕೊಂಡರು. ಲಾಂದ್ರದ ಒಳಗೆ ಅಜ್ಜಿ ಕಾಗದದ ಹೂವುಗಳನ್ನು ಕತ್ತರಿಸಿ, ಅದನ್ನು ಸರಿ ಮಾಡುತ್ತಾ ಇದ್ದಳು, ಪತಿಯಾ ಅವುಗಳನ್ನು ತೆಗೆದುಕೊಂಡು ಲಾಂದ್ರದ ಮೇಲ್ಭಾಗದಲ್ಲಿ ಆಕರ್ಷಕ ರೀತಿಯಲ್ಲಿ, ಅಂಟಿಸುತ್ತಾ ಇದ್ದನು. ಅವರು ಮಾಡುತ್ತಿದ್ದ ಲಾಂದ್ರ ಬಿಳಿ, ನೀಲಿ ಮತ್ತು ಕೆಂಪಾಗಿತ್ತು.

ಅವಸರದಲ್ಲಿ ಉಂಡು ಮತ್ತೆ ಕೆಲಸ ಮುಂದುವರಿಸಿದರು. ಅಜ್ಜಿ ಬೇಗ ಬೇಗ, ಮೌನವಾಗಿ ಕೆಲಸ ಮಾಡುತ್ತಿದ್ದಳು, ಪತಿಯಾ ಆಗಾಗ್ಗೆ ಹಾಡಿನ ಚುಟುಕಿಯನ್ನು ಗುನುಗುತ್ತಿದ್ದನು; ಅವರ ಬೆರಳುಗಳು ಚುರುಕಾಗಿ, ಕತ್ತರಿಸುತ್ತಾ ಹಚ್ಚುತ್ತಾ, ಅಂಟಿಸುತ್ತಾ, ಚಲಿಸುತ್ತಾ ಇದ್ದವು. ಸೂರ್ಯ ಮುಳುಗಿದಾಗ ಲಾಂದ್ರವನ್ನು ಹಚ್ಚಲು ಸಿದ್ಧಪಡಿಸಬೇಕು ಎಂಬ ಯೋಚನೆ ಬಿಟ್ಟರೆ ಬೇರೆ ಯಾವ ಯೋಚನೆಯೂ ಅಜ್ಜಿಗೆ ಇರಲಿಲ್ಲ. ಅವಳು ಒಂದು ಉದ್ದದ ಕಾಗದವನ್ನು ಕತ್ತರಿಸುವಳು, ಸ್ವಲ್ಪ ಮಡಿಸುವಳು, ಒಂದು ಹೊಸ ಆಕಾರದಲ್ಲಿ ಕತ್ತರಿಸುವಳು ಮತ್ತೆ ಅದರಿಂದ ಯಾವುದೋ ಸುಂದರವಾದ ಆಕಾರ ಬರುತ್ತಿತ್ತು. ಅದನ್ನು ಪತಿಯಾ ತೆಗೆದುಕೊಂಡು ಲಾಂದ್ರಕ್ಕೆ ಸಿಗಿಸಿ ಅಂಟಿಸುವನು.

ಸೂರ್ಯ ಮುಳುಗುವವರೆಗೂ ಅವರು ಕೆಲಸ ಮಾಡಿದರು. ಕೂಡಲೇ ರಾತ್ರಿಯಾಯಿತು. ಈ ರಾತ್ರಿ ಎಲ್ಲಾ ಕಡೆ ಕತ್ತಲು ಇರುವುದಿಲ್ಲ. ರಾತ್ರಿಯನ್ನು ಅಲಂಕರಿಸಲು ಎಲ್ಲಾ ದಿಕ್ಕುಗಳಲ್ಲೂ ಬೆಳಕಿನ ಚುಕ್ಕೆಗಳು ಇರುವುವು.

ದೇವಾಲಯದ ಗಂಟೆ ಬಾರಿಸಿತು, ತಮಟೆ ಶಬ್ದ ಕೇಳಿಸಿತು. ಅದು ಸಂಜೆಯ ಉತ್ಸವದ ಸಮಯವಾಗಿತ್ತು. ಪತಿಯಾ ಸುತ್ತಲೂ ನೋಡಿದನು. ಮನೆಗಳಿಂದ ಹೊಗೆ ಬಣ್ಣದ ದೀಪಗಳ ಗುಂಪುಗಳು ಅಲ್ಲಾಡುತ್ತಿರುವುದು ಕಾಣಿಸಿತು.

ನಿಧಾನವಾಗಿ ಆ ಲಾಂದ್ರಗಳು ಎಲ್ಲಾ ದಿಕ್ಕುಗಳಲ್ಲೂ ಚಲಿಸಿದ್ದುವು. ಅವು ನಿರ್ದಿಷ್ಟವಾದ ಆಕಾರದಲ್ಲಿ ಪ್ರಕಾಶಮಾನವಾಗಿ ಹೊಳೆಯುತ್ತಿದ್ದುವು.

ಕೊನೆಯ ಅಲಂಕಾರ ಸರಿಯಾಗಿ ಮುಗಿಯಿತು. ಪತಿಯಾ ಎದ್ದು ನಿಂತನು. ಅವನ ಉಜ್ವಲ ಮುಖ ಸಂತೋಷದಿಂದ ಹೊಳೆಯಿತು ಲಾಂದ್ರದೊಳಗೆ ಅಜ್ಜಿಯ ಕತ್ತರಿ 'ಕ್ಲಿಕ್ ಕ್ಲಿಕ್' ಶಬ್ದ ಮಾಡುತ್ತಿತ್ತು. ಅವಳು ಇನ್ನೂ ಬಣ್ಣದ ಕಾಗದಗಳನ್ನು ಕತ್ತರಿಸುತ್ತಾ ಕುಳಿತಿದ್ದಳು.

'ನಿಲ್ಲಿಸು, ಅಜ್ಜೀ, ನಿಲ್ಲಿಸು' ಪತಿಯಾ ಸಂತೋಷದಿಂದ ಕೂಗಿದನು, 'ಲಾಂದ್ರ

ಮುಗಿಯಿತು'.

'ಬುದ್ಧನ ದಯೆಯಿಂದ....' ಅಜ್ಜಿ ಪ್ರಾರಂಭಿಸಿದಳು, ಆಮೇಲೆ ಅವಳು ಸುಮ್ಮನಾದಳು. ಒಂದು ಕ್ಷಣದ ನಂತರ ಅವಳು ಕೂಗಿದಳು: 'ಆದರೆ, ಪತಿಯಾ! ಪತಿಯಾ! ಅ......ಅ! ನಾನು ಹೇಗೆ ಹೊರಗೆ ಬರಲಿ? ನೀನು ನನ್ನನ್ನು ಒಳಗೆ ಅಂಟಿಸಿಬಿಟ್ಟಿದ್ದೀಯಾ'.

ಅವನ ಉತ್ಸಾಹದಲ್ಲಿ ಪತಿಯಾ ನಿಜವಾಗಿಯೂ ಅಜ್ಜಿ ಹೊರಗೆ ಬರಲು ಬಿಟ್ಟಿದ್ದ ಒಂದು ಕಿಂಡಿಯನ್ನು ಮುಚ್ಚಿಬಿಟ್ಟಿದ್ದನು.

'ಓ, ಅಜ್ಜೀ! ಈಗೇನು ಮಾಡಲಿ? ಈಗ ನಾವು ಕಾಗದವನ್ನು ಕತ್ತರಿಸಲಾಗುವುದಿಲ್ಲ' ಪತಿಯಾ ಅಂಗಲಾಚಿದನು.'ಯೋಚಿಸಬೇಡ, ನನ್ನ ಚಿನ್ನ' ಅಜ್ಜಿ ಲಾಂದ್ರದ ಒಳಗಿಂದ ಕೂಗಿದಳು, 'ಎಲ್ಲಾ ಸಮಸ್ಯೆಗಳಿಗೂ ಪರಿಹಾರಗಳಿದ್ದೇ ಇವೆ. ಬೆಂಕಿಕಡ್ಡಿ ಪೆಟ್ಟಿಗೆಯನ್ನು ನನಗೆ ಕೊಡು, ನಾನು ಮೇಣದಬತ್ತಿಗಳನ್ನು ಹಚ್ಚುವೆನು.'

ಪತಿಯಾ ಬೆಂಕಿ ಕಡ್ಡಿ ಪೆಟ್ಟಿಗೆಗಳನ್ನು ಹುಡುಕಿದನು. ಮೇಲ್ಗಡೆ ಇರುವ ಕಿಂಡಿಯಿಂದ ಅವನು ತಾನೇ ಕೆಳಗೆ ಬಗ್ಗಿ ಮೇಣದಬತ್ತಿಗಳನ್ನು ಹಚ್ಚಬಹುದಾಗಿತ್ತು. ಆದರೆ ಅಜ್ಜಿ ಒಳಗೆ ಇದ್ದುದರಿಂದ, ಅವನು ಬೆಂಕಿ ಕಡ್ಡಿ ಪೆಟ್ಟಿಗೆಯನ್ನು ಅವಳಿಗೆ ಎಸೆದನು. ಲಾಂದ್ರವು ಪ್ರಕಾಶಮಾನವಾದ ಬೆಳಕಿನಿಂದ ಉರಿಯುವವರೆಗೆ, ಮೇಣದಬತ್ತಿಗಳನ್ನು ಒಂದೊಂದಾಗಿ ಹಚ್ಚಿದಳು.

'ನಿನಗೆ ಸಂತೋಷವಾಗಲಿಲ್ಲವೇ, ಮಗೂ' ಅವಳು ಕೂಗಿದಳು, ಆದರೆ ಪತಿಯಾ ಉತ್ತರ ಕೊಡುವ ಮೊದಲು, ಅವಳು ಹೇಳುತ್ತಾ ಹೋದಳು: 'ನನ್ನ ಭಾಗಕ್ಕೆ ನಾನು ಸುಖಿಯೇ, ಏಕೆಂದರೆ ನಾನು ಪ್ರತಿಸಲ ವೇಸಕ್ ರಾತ್ರಿಯಲ್ಲಿ ಮಾಡುತ್ತಿರುವುದನ್ನು ಮಾಡಲು ಇನ್ನೂ ಸಮಯ ಇದೆ'; ಆಮೇಲೆ ಅವಳು ಬುದ್ಧನ ಕೆಲವು ವಾಕ್ಯಗಳನ್ನು ಹೇಳಿದಳು, 'ಸ್ವಲ್ಪ ಸಂತೋಷವನ್ನು ತ್ಯಾಗ ಮಾಡುವುದರಿಂದ ಇನ್ನೊಬ್ಬರಿಗೆ ತುಂಬಾ ಸಂತೋಷ ಸಿಗುವಹಾಗಿದ್ದಲ್ಲಿ ತನ್ನ ಸಣ್ಣ ಸಂತೋಷವನ್ನು ದೊಡ್ಡದಕ್ಕಾಗಿ ತ್ಯಾಗ ಮಾಡಬೇಕು.'

ಪತಿಯಾಗೆ ಇದು ಚೆನ್ನಾಗಿ ಅರ್ಥವಾಗಲಿಲ್ಲ. ಆದರೆ ತನ್ನ ಅಜ್ಜಿಗೆ ಸಂತೋಷವಾಗಿದೆಯೆಂದು ತಿಳಿಯಿತು, ತನ್ನ ತಿಳುವಳಿಕೆಗೆ ಮೀರಿದ ಸಂತೋಷ ಅವನಿಗಾಯಿತು.

ಈಗ ಒಂದು ಚಿನ್ನದ ತಟ್ಟೆ ಪೂರ್ವದ ಆಕಾಶದಲ್ಲಿ ಏರಿ ಬರುತ್ತಿತ್ತು. 'ವೇಸಕ್' ಉತ್ಸವದಲ್ಲಿ ಭಾಗಿಯಾಗಲು ಸ್ವರ್ಗದಿಂದ ತೇಲುತ್ತಾ ಪೂರ್ಣಚಂದ್ರ ಬರುತ್ತಿದ್ದ. ಲಾಂದ್ರವು ಆ ರಾತ್ರಿಯ ರಾಣಿ ತನ್ನ ವಜ್ರಖಚಿತ ಕಿರೀಟವನ್ನು ಭೂಮಿಯ ಮೇಲೆ ಬಿಟ್ಟು ಹೋಗಿರುವಂತೆ ಕಾಣಿಸುತ್ತಿತ್ತು. ಅದು ಆ ಮಾಳಿಗೆ ಮನೆಯ ಬಾಗಿಲಿಗೆ ಇಳಿದು ಬಂದಂತೆ ಕಾಣಿಸುತ್ತಿತ್ತು. ಆ ವಜ್ರದ ಸೌಂದರ್ಯ ಹಾಗೂ ಹೊಳಪನ್ನು ಚಿಕ್ಕ ಹುಡುಗನೊಬ್ಬ ತನ್ನ ಕಣ್ಣುಗಳಲ್ಲಿ ತುಂಬಿಕೊಳ್ಳುತ್ತಾ ನಿಂತಿದ್ದಂತೆ ಕಂಡಿತು.



ಲಾಂದ್ರದ ಇನ್ನೊಂದು ಕಡೆ ಒಬ್ಬ ಮುದುಕಿಯ ಛಾಯಾರೂಪ ಪ್ರಾರ್ಥನಾ ಮುದ್ರೆಯಲ್ಲಿ ತಲ್ಲೀನವಾಗಿದ್ದಂತೆ ಕಾಣಸುತ್ತಿತ್ತು.

ನಿಜವಾಗಿಯೂ ಇದು ಎಲ್ಲಾ ವೇಸಕ್ ಲಾಂದ್ರಗಳಿಗಿಂತ ತುಂಬಾ ಬೃಹತ್ ಲಾಂದ್ರವಾಗಿತ್ತು. ಹಳ್ಳಿಯ ಜನರೆಲ್ಲರೂ ರಾತ್ರಿಯಲ್ಲಿ ಇದನ್ನು ನೋಡಲು ಬಂದರು. ಕೆಲವರು ದೂರ ದೂರದಿಂದ ಬಂದಿದ್ದರು. ಅವರು ಮಧ್ಯ ರಾತ್ರಿಯಾದ ಮೇಲೂ ಬಂದರು. ಉರಿಯುತ್ತಿರುವ ಆ ಸುಂದರ ದೃಶ್ಯವನ್ನು ನೋಡುತ್ತಾ ಅವರು ಮೌನವಾಗಿ ನಿಂತರು, ಉರಿಯುತ್ತಿರುವ ಲಾಂದ್ರ ಮತ್ತು ಅದರೊಳಗಿಂದ ಹೊರಬಿದ್ದ ಧ್ಯಾನಮಗ್ನ ಛಾಯೆಯನ್ನು ನೋಡುತ್ತಾ ನಿಂತರು.

ಚಂದ್ರನು ನೆತ್ತಿಯ ಮೇಲೆ ಸೌಮ್ಯವಾಗಿ ಬೆಳಗಿದನು. ಮೋಡಗಳ ನೆರಳುಗಳ ಪರದೆ ಆ ಲಾಂದ್ರವನ್ನು ಮುಚ್ಚಿತ್ತು. ಎಲ್ಲೆಲ್ಲೂ ನೀರವತೆ, ಚಿರಶಾಂತಿ ನೆಲೆಸಿತ್ತು.

ಮಸುಕು ಮಸುಕಾಗಲು ಪ್ರಾರಂಭವಾಯಿತು. ಒಂದಾದ ಮೇಲೊಂದರಂತೆ ಮೇಣದಬತ್ತಿಗಳು ಮೌನವಾಗಿ ಉರಿದುಹೋಗುತ್ತಿದ್ದುವು. ಅಜ್ಜಿಯು ಲಾಂದ್ರದ ಒಂದು ಪಕ್ಕವನ್ನು ಹರಿದುಕೊಂಡು ಹೊರಗೆ ಹೆಜ್ಜೆ ಇಟ್ಟಳು. ಹೊರಗೆ ಲಾಂದ್ರದ ಪಕ್ಕದಲ್ಲಿ ಪತಿಯಾ ಮಲಗಿ ನಿದ್ರೆ ಮಾಡುತ್ತಿದ್ದನು. ಅವನ ಮುಖದ ಮೇಲೆ ಸಂಪೂರ್ಣ ತೃಪ್ತಿಯ ಛಾಯೆಯಿತ್ತು. ಬಹುಶಃ ಅವನು ಕನಸಿನಲ್ಲಿ ಕೂಡಾ, ಲಾಂದ್ರ ತನ್ನ ಮನೆಯಷ್ಟು ದೊಡ್ಡದಾಗಿರುವುದನ್ನು ನೋಡುತ್ತಿದ್ದ ಎನಿಸುತ್ತದೆ. ಕ್ರಮೇಣ ಆ ಲಾಂದ್ರದ ಬೆಳಕು ಮಂದಗತಿಯಲ್ಲಿ ಬೆಳಗತೊಡಗಿತು.

**ಚಿತ್ರಗಳು: ಸೋಮಾಸಿರಿ ಹೇರತ್**

### ಥೈಲ್ಯಾಂಡ್

# ಮೊಟ್ಟೆ ಒಡೆಯುವ ಧೀರ

### ಮನೋಪ್ ಕ್ಯೂಸಾನಿತ್

'ಜ್ಯೂಕ್, ನೀನಿಂದು ಜಾತ್ರೆಗೆ ಹೋಗುತ್ತಿಲ್ಲವೆ? ಸಂಜೆಯಾಗುತ್ತಾ ಬಂತು' ತಾಯಿ ಕೇಳಿದಳು.

'ಖಂಡಿತ ಹೋಗುತ್ತೇನಮ್ಮಾ. ಅಷ್ಟಕ್ಕೂ ಜಾತ್ರೆ ವರ್ಷಕ್ಕೆ ಒಂದೇ ಸಲ ಬರುತ್ತದೆ.'

'ಈ ವರ್ಷ ವಿಶೇಷವಿದೆ, ನಿನಗೆ ಗೊತ್ತಲ್ಲಾ'.

ತಾಯಿ ಹೇಳಿದಳು. 'ವಿವಿಧ ಪ್ರದರ್ಶನಗಳಿವೆ – ಸಿನಿಮಾಗಳು, ಹಾಡುವವರ ಮೇಳ, ಜಾನಪದ ನಾಟಕ, ನೆರಳಿನ ಬೊಂಬೆಯಾಟ; ಅವುಗಳನ್ನೆಲ್ಲಾ ನೋಡಲು ಸಾಕಷ್ಟು ಸಮಯವಿರುವುದಿಲ್ಲ....'

'ಜಾತ್ರೆ ಎಷ್ಟು ದಿನ ಇರುತ್ತದೆ?.....', 'ಮೂರು ದಿನಗಳು ಎಂದು ಹೇಳಿದೆನಲ್ಲ, ಮತ್ತೆ ಅಲ್ಲೇನು ಮಾಡುತ್ತಿರುವೆ?

'ಜಾತ್ರೆಯಲ್ಲಿ ಆಡುವ ಮೊಟ್ಟೆ ಒಡೆಯುವ ಆಟಕಾಗಿ. ನಾನೊಂದು ಮೊಟ್ಟೆಯನ್ನು ಬೇಯಿಸುತ್ತಿದ್ದೇನೆ'.

ಜ್ಯೂಕ್ ಯೋಚಿಸತೊಡಗಿದ. ದೇವಸ್ಥಾನದ ಆವರಣ ತುಂಬಾ ಚಟುವಟಿಕೆಯಿಂದಿರುವುದು, ತುಂಬಾ ಜನ ಬರುವರು, ನಮ್ಮ ಹಳ್ಳಿಯಿಂದ ಮಾತ್ರವಲ್ಲದೆ ಹತ್ತಿರದ ಹಳ್ಳಿಗಳಿಂದಲೂ ಬರುತ್ತಾರೆ. ತಮ್ಮ ಅತ್ಯಂತ ಉತ್ತಮ ಬಟ್ಟೆಗಳು ಹಾಗೂ ಅಲಂಕಾರ ಸಾಮಗ್ರಿಗಳು, ಕಂಠಾಹಾರಗಳು, ಕಿವಿಯ ಆಭರಣಗಳು ಹಾಗೂ ಎಲ್ಲಾ ವಿಧವಾದ ಚಿನ್ನದ ಒಡವೆಗಳನ್ನು ಧರಿಸಿಕೊಂಡು ಬರುವರು. ತಮ್ಮಲ್ಲಿರುವ ವಸ್ತುಗಳನ್ನು ಪ್ರದರ್ಶಿಸಲು ಈ ಜಾತ್ರೆಯಲ್ಲಿ ಒಂದು ಒಳ್ಳೆಯ ಅವಕಾಶ. ಅಷ್ಟಕ್ಕೂ ಅಂತಹ ಅವಕಾಶಗಳೆಲ್ಲಾ ಎಲ್ಲರಿಗೂ ಆಗಾಗ್ಗೆ ಸಿಗುವುದಿಲ್ಲ. ಹುಡುಗರು ಮೊಟ್ಟೆ ಒಡೆಯುವ ಆಟಕ್ಕಾಗಿ ಮನೆಯಿಂದ ಬಾತುಕೋಳಿಯ ಮೊಟ್ಟೆಗಳನ್ನು ತರುವರು ಅಥವಾ ಜಾತ್ರೆಯಲ್ಲೇ ಹಂಚಿಕೊಳ್ಳುವರು.

ಬೇಗನೆ ಕತ್ತಲಾಗತೊಡಗಿತು. ಬೇಯಿಸಿದ ಮೊಟ್ಟೆಯನ್ನು ಎಚ್ಚರಿಕೆಯಿಂದ ಜೇಬಿನಲ್ಲಿ ಇಟ್ಟುಕೊಂಡು ಜ್ಯೂಕ್, ನೆಂಗ್,ಕೂನ್ ಮತ್ತು ಜೋರವ್ ಎಂಬ ಹೆಸರಿನ ಸ್ನೇಹಿತರುಗಳನ್ನು ಭೇಟಿಯಾಗಲು ಹೊರಟನು. ಆ ನಾಲ್ವರೂ ದೇವಸ್ಥಾನಕ್ಕೆ

ಹೋದರು.

ಸ್ವಲ್ಪ ಕಾಲ ಅವರು ಆವರಣದ ಸುತ್ತಲೂ ಗದ್ದಲದ ನಡುವೆ ತಿರುಗಾಡಿ, ಆಗತಾನೇ ಪ್ರಾರಂಭವಾಗುವುದರಲ್ಲಿದ್ದ 'ಮನೋರಾ' ನೃತ್ಯವನ್ನು ನೋಡಲು ನಿಂತುಕೊಂಡರು. ಆ ನೃತ್ಯಗಾರರು ತುಂಬಾ ಹೆಸರು ಮಾಡಿದ್ದರು. ರಂಗಭೂಮಿಯ ಎದುರಿಗೆ ತಮ್ಮ ಆಸನಗಳಿಗಾಗಿ ಅನೇಕರು ಹುಲ್ಲಿನ ಚಾಪೆಗಳನ್ನು ತಂದು ನೆಲದ ಮೇಲೆ ಹಾಕಿದ್ದರು.

ನೃತ್ಯವನ್ನು ಸ್ವಲ್ಪ ಕಾಲ ನೋಡಿದ ಮೇಲೆ, ಆ ನಾಲ್ಕು ಸ್ನೇಹಿತರು ನೆರಳಿನ ಗೊಂಬೆಯಾಟವನ್ನು ನೋಡಲು ಹೋದರು. ಇಲ್ಲಿನ ಪ್ರೋತೃಗಳಲ್ಲಿ ಹೆಚ್ಚು ಜನ ವಯಸ್ಸಾದವರಿದ್ದರು. ಆ ಹುಡುಗರು ಅಲ್ಲಿ ಹೆಚ್ಚು ಕಾಲ ನಿಲ್ಲಲಿಲ್ಲ. ಹೇಗೋ ಅವರು ಈ ಆಟಗಳು ಮತ್ತು ನೃತ್ಯಗಳಲ್ಲದೆ ಬೇರೆ ಯಾವುದರ ಬಗ್ಗೆಯೋ ಯೋಚಿಸುತ್ತಿದ್ದರು. ಅವರು ಸುತ್ತಲೂ ತಿರುಗಾಡುತ್ತಾ ಇದ್ದರು.

ಅಷ್ಟರಲ್ಲಿ ಅವರು ಕುದಿಸಿದ ಬಾತುಕೋಳಿಯ ಮೊಟ್ಟೆಗಳನ್ನು ಮಾರುತ್ತಿದ್ದ ಅಂಗಡಿಯನ್ನು ತಲುಪಿದರು. ಯಾವಾಗಲೂ ಅವರು ಹೋಗಬೇಕೆಂದುಕೊಂಡಿದ್ದ ಜಾಗ ಅದು. ಅಲ್ಲಿ ಅನೇಕ ಯುವಕರು ಮತ್ತು ಮಕ್ಕಳೂ ಗಟ್ಟಿಯಾಗುವಂತೆ ಕುದಿಸಿದ ಮೊಟ್ಟೆಗಳ ಬಟ್ಟಲುಗಳ ಸುತ್ತಲೂ ಗುಂಪು ಕಟ್ಟಿಕೊಂಡಿದ್ದರು. ಅವರಿಗೆಲ್ಲಾ ಅಷ್ಟು ಹಸಿವಾಗಿತ್ತೇ? ಖಂಡಿತ ಇಲ್ಲ! ಅವು ತಿನ್ನುವುದಕ್ಕಲ್ಲ, ಮೊಟ್ಟೆ ಒಡೆಯುವ ಆಟಕ್ಕಾಗಿ; ಅದೊಂದು ವಿಧದ ಸ್ಪರ್ಧೆ, ಹಣಕ್ಕೆ ಬದಲಾಗಿ ಮೊಟ್ಟೆಗಳನ್ನು





ಉಪಯೋಗಿಸಿ ಆಡುವ ಮಕ್ಕಳ ಆಟವಾಗಿತ್ತು. ಇಬ್ಬರು ಸ್ಪರ್ಧಿಗಳು ಇರುತ್ತಿದ್ದರು. ಪ್ರತಿಯೊಬ್ಬರೂ ಒಂದು ಮೊಟ್ಟೆಯನ್ನು ತೆಗೆದುಕೊಳ್ಳುವುದು, ಒಬ್ಬರ ಮೇಲೆ ಇನ್ನೊಬ್ಬರ ಮೊಟ್ಟೆಯನ್ನು ಹೊಡೆಯುವುದು. ಸಾಧಾರಣವಾಗಿ, ಒಂದು ಮೊಟ್ಟೆ ಬಿರುಕು ಬಿಡುವುದು. ಗಟ್ಟಿಯಾದ ಮೊಟ್ಟೆ ಇಡಿಯಾಗಿ ಉಳಿದುಕೊಳ್ಳುವುದು. ಮತ್ತೆ ಆ ಒಡೆಯದೆ ಇದ್ದ ಮೊಟ್ಟೆಯನ್ನು ಹೊಂದಿದ ಹುಡುಗ ತನ್ನ ಪ್ರತಿಸ್ಪರ್ಧಿಯಿಂದ ಬಿರುಕು ಬಿಟ್ಟ ಮೊಟ್ಟೆಯನ್ನು ಪಡೆಯುವನು. ಒಮ್ಮೊಮ್ಮೆ ಎರಡೂ ಮೊಟ್ಟೆಗಳು ಬಿರುಕು ಬಿಡುವುವು. ಆಗ ಆಟ ಸಮನಾಗಿ ಪ್ರತಿಯೊಬ್ಬ ಹುಡುಗನೂ ಅವನ ಸ್ವಂತ ಮೊಟ್ಟೆಯನ್ನು ಉಳಿಸಿಕೊಳ್ಳುವನು.

ಜೋರಮ್ ಹೇಳಿದ, ' ಆಟ ಪ್ರಾರಂಭಿಸಲು ಮೊಟ್ಟೆಗಳನ್ನು ಕೊಂಡುಕೊಳ್ಳೋಣ'.

'ಒಂದು ಮೊಟ್ಟೆಗೆ ಎಷ್ಟು ದುಡ್ಡು? ಇಬ್ಬರು ಹುಡುಗರು ಅಂಗಡಿಯ ಯಜಮಾನಿಯನ್ನು ಕೇಳಿದರು. 'ಒಂದೇ ಒಂದು ಭಾಟ್' (ಥೈಲ್ಯಾಂಡಿನ ಒಂದು ನಾಣ್ಯ) ಎಂದಳು ಆ ಹೆಂಗಸು. ಹುಡುಗರು ಅತ್ಯಂತ ಗಟ್ಟಿಯಾದ ದಪ್ಪ ಚಿಪ್ಪು

ಇರುವ ಮೊಟ್ಟೆಯನ್ನು ಆರಿಸಲು ಪ್ರಯತ್ನಿಸಿದರು. ತಾವು ಆರಿಸುವ ಮೊದಲು ಅವರು ಅನೇಕ ಮೊಟ್ಟೆಗಳನ್ನು ಹತ್ತಿರದಿಂದ ವೀಕ್ಷಿಸಿದರು. ಕೊನೆಗೆ ಪ್ರತಿಯೊಬ್ಬ ಹುಡುಗನೂ ತನಗೆ ಉತ್ತಮ ಅನ್ನಿಸಿದ ಮೊಟ್ಟೆಯನ್ನು ಕೊಂಡುಕೊಂಡನು. ಮನೆಯಿಂದ ತನ್ನ ಸ್ವಂತ ಮೊಟ್ಟೆಯನ್ನು ತಂದಿದ್ದ ಜ್ಯೂಕ್‌ನನ್ನು ಬಿಟ್ಟು, ಎಲ್ಲರೂ ಒಂದೊಂದು ಮೊಟ್ಟೆಯನ್ನು ಆರಿಸಿಕೊಂಡರು.

'ಬಾ, ಜ್ಯೂಕ್', ಜೋರಮ್ ಹೇಳಿದ, 'ನಿನ್ನ ಮೊಟ್ಟೆಯ ಮೇಲೆ ನಾನು ಒಂದು ಕೈ ನೋಡಲೆ?'

'ಓ, ಹಾಗೇ ಆಗಲಿ, ಆದರೆ ಕೆಳಗಿಡುವ ಮೊಟ್ಟೆ ಯಾರದು?'

'ನಾನೇ ಇಡುವೆ' ಜೋರಮ್ ಹೇಳಿದ. ಅವನು ತನ್ನ ಮೊಟ್ಟೆಯನ್ನು ಎಚ್ಚರಿಕೆಯಿಂದ ಒಂದು ಕೈಯಲ್ಲಿ ಇಟ್ಟುಕೊಂಡನು, ದೊಡ್ಡ ಗುಂಡನೆಯ ತುದಿಯನ್ನು ಮೇಲೆ ಮಾಡಿ, ಜ್ಯೂಕ್‌ನ ಮುಂದೆ ಹಿಡಿದನು.

ಜ್ಯೂಕ್ ತನ್ನ ಮೊಟ್ಟೆಯನ್ನು ದಪ್ಪ ತುದಿ ಕೆಳಗೆ ಬರುವಂತೆ ಗಟ್ಟಿಯಾಗಿ ಹಿಡಿದುಕೊಂಡನು. ಮೊಟ್ಟೆಯನ್ನು ಗಾಳಿಯಲ್ಲಿ ಮೇಲೆ ಎತ್ತುತ್ತಾ 'ಹೋಗುತ್ತೆ ನೋಡೀಗ!' ಎಂದು ಕೂಗಿದನು, ಆಮೇಲೆ ಅವನು ಅದನ್ನು ಕೆಳಗೆ ತಂದು ಜೋರಮ್‌ನ ಮೊಟ್ಟೆಯ ಮೇಲೆ ಜೋರಾಗಿ ಹೊಡೆದನು.

ಆಗ ಒಂದು ಮೊಟ್ಟೆ ಒಡೆದ 'ಶಬ್ದ!' ಕೇಳಿಬಂತು. ಜ್ಯೂಕ್‌ನ ಮೊಟ್ಟೆ ಒಡೆದದ್ದು ಹುಡುಗರಿಗೆ ಕಾಣಿಸಿತು.

'ವಾಹ್' ಎಂದು ಜೋರಮ್ ತನ್ನ ಮೊಟ್ಟೆಯನ್ನು ಅಲ್ಲಾಡಿಸುತ್ತಾ ಜಯಘೋಷ ಮಾಡಿದನು. ಜ್ಯೂಕ್‌ನ ಒಡೆದ ಮೊಟ್ಟೆಯನ್ನು ಬಹುಮಾನವಾಗಿ ಪಡೆದನು. ತನ್ನ ಉಳಿದ ಸ್ನೇಹಿತರುಗಳ ಕಡೆ ತಿರುಗಿ ಜೋರಮ್ ಹೇಳಿದನು, 'ಮುಂದೆ ನನ್ನನ್ನು ಯಾರು ಎದುರಿಸುವಿರಿ?'

'ನಾನೂ ಬರುವೆ', ನೆಂಗ್ ತಾನು ಆರಿಸಿದ ಮೊಟ್ಟೆಯನ್ನು ಮೇಲಕ್ಕೆ ಹಿಡಿದುಕೊಂಡು ಕೂಗಿದನು. 'ಹಾಗೇ ನೋಡು! ನನ್ನ ಚಿಪ್ಪು ಎಷ್ಟು ಹಸಿರಾಗಿದೆ! ಅಂದರೆ ಇದು ತುಂಬಾ ಗಟ್ಟಿ, ಖಂಡಿತವಾಗಿಯೂ ಇದು ನಿನ್ನ ಮೊಟ್ಟೆಯನ್ನು ಒಡೆಯುವುದು'.

'ಒಪ್ಪಿಗೆಯಿದು' ಜೋರಮ್ ಹೇಳಿದನು, 'ಹಾಗೇ ನಾವೂ ನೋಡೋಣ, ನಿನ್ನದು ಕೆಳಗಿನ ಮೊಟ್ಟೆ'.

ನೆಂಗ್ ತನ್ನ ಮೊಟ್ಟೆಯನ್ನು ಹೊರಗೆ ಹಿಡಿದನು. ನಗುತ್ತಾ ಜೋರಮ್ ತನ್ನ ಮೊಟ್ಟೆಯನ್ನು ಪ್ರೀತಿಯಿಂದ ಸವರಿ ಕೆಳಗಿರುವ ನೆಂಗ್‌ನ ಮೊಟ್ಟೆಯ ಮೇಲೆ ಜೋರಾಗಿ ಹೊಡೆದನು.

'ಠಕ್!' ಶಬ್ದ ಬಂತು. ಜೋರಮ್‌ನ ಮೊಟ್ಟೆ ಒಡೆದಿತ್ತು.

'ಹಾ' ನೆಂಗ್ ಸಂತೋಷದಿಂದ ಕೂಗಿದನು, ಜೋರಮ್‌ನ ಮೊಟ್ಟೆಯನ್ನು

ತೆಗೆದುಕೊಳ್ಳುತ್ತಾ, 'ನನ್ನದು ಉತ್ತಮವೆಂದು ಹೇಳಿದಿ' ಎಂದನು.

ಜ್ಯಾಕ್ ಅಂಗಡಿಯ ಯಜಮಾನನಿಂದ ಇನ್ನೊಂದು ಮೊಟ್ಟೆಯನ್ನು ಕೊಂಡುಕೊಂಡನು. ಸ್ವಲ್ಪ ಹೊತ್ತು ನಾಲ್ಕು ಜನ ಸ್ನೇಹಿತರೂ ಆಟವನ್ನು ಆಡುತ್ತಾ ಇದ್ದರು. ಯಾರೂ ಗೆಲ್ಲಲಿಲ್ಲ ಅಥವಾ ತುಂಬಾ ಕಳೆದುಕೊಳ್ಳಲಿಲ್ಲ. ಆದರೆ, ಅವರು ಹೊಸ ಮೊಟ್ಟೆಗಳನ್ನು ಕೊಳ್ಳುತ್ತಿದ್ದರು. ಕ್ರಮೇಣ ಒಬ್ಬರಿಂದೊಬ್ಬರು ಗೆದ್ದಂತಹ ಒಡೆದ ಮೊಟ್ಟೆಗಳನ್ನು ಬಹಳವಾಗಿ ಕೂಡಿ ಹಾಕಿದರು, ಕೊನೆಗೆ ತಮ್ಮ ಎಲ್ಲಾ ಒಡೆದ ಮೊಟ್ಟೆಗಳನ್ನು ಶೇಖರಿಸಿಕೊಂಡು ಒಂದು ಉಪಾಹಾರದ ಅಂಗಡಿಗೆ ಹೋದರು. ಅನ್ನ, ಸಾರು ಮತ್ತು ಬೇಯಿಸಿದ ಮೊಟ್ಟೆಗಳ ಸೊಗಸಾದ ಊಟವನ್ನು ಮಾಡಿದರು.

ಅವರು ತಮ್ಮ ತಮ್ಮ ಮನೆಗಳಿಗೆ ಬೇರೆ ಬೇರೆ ದಾರಿಯಲ್ಲಿ ಹೊರಡಲು ಸಿದ್ಧವಾದಾಗ ತಾವೆಲ್ಲರೂ ತಮ್ಮ ತಮ್ಮ ಮನೆಗಳಿಂದ ಸ್ವಂತ ಮೊಟ್ಟೆಗಳನ್ನು ತರುವುದಾಗಿ ಮತ್ತು ಮೂರನೇ ದಿನ ಸಂಜೆ ತಮ್ಮ ಆಟವನ್ನು ಮುಂದುವರಿಸಲು ಜಾತ್ರೆಯಲ್ಲಿ ಸೇರುವುದಾಗಿ ಒಪ್ಪಿಕೊಂಡರು.

ಮೂರನೆ ದಿನ ಮಧ್ಯಾಹ್ನದ ನಂತರ ಜ್ಯಾಕ್ ಅಂಗಳದಲ್ಲಿ ಬೆಂಕಿ ಹಾಕಿ ಮೊಟ್ಟೆಯನ್ನು ಬೇಯಿಸಲು ಪ್ರಾರಂಭಿಸಿದನು. ಆಗ, ತಂದೆ ಕೇಳಿದರು, 'ಜ್ಯಾಕ್, ಏನು ಮಾಡುತ್ತಿದ್ದೀಯಾ?'

'ಈ ಸಂಜೆ ಮೊಟ್ಟೆ ಒಡೆಯುವ ಆಟಕ್ಕಾಗಿ ಮೊಟ್ಟೆಯನ್ನು ಬೇಯಿಸುತ್ತಿದ್ದೇನೆ'.

ತಮ್ಮ ಯೌವನ ಕಾಲದಲ್ಲಿ ಅದೇ ಆಟ ಆಡುತ್ತಿದ್ದ ಹಿಂದಿನ ದಿನಗಳನ್ನು ಮನಸ್ಸಿನಲ್ಲಿ ತಂದುಕೊಂಡು ಅವರು ನಸು ನಕ್ಕರು, ಅವರು ಜ್ಯಾಕ್‌ನನ್ನು ತುಂಬಾ ಪ್ರೀತಿಸುತ್ತಿದ್ದರು, ಪ್ರತಿಯೊಂದನ್ನೂ ಅವರು ಪ್ರೀತಿಯಿಂದ ಗಮನವಿಟ್ಟು ಅವನಿಗೆ ಹೇಳಿಕೊಡುತ್ತಿದ್ದರು. ಜ್ಯಾಕ್ ಒಬ್ಬ ಒಳ್ಳೆಯ ಮನುಷ್ಯನಾಗಿ ಬೆಳೆಯಬೇಕೆಂಬುದು ಅವರ ಆಸೆಯಾಗಿತ್ತು. ಆದ್ದರಿಂದ ಜ್ಯಾಕ್, ಆ ಸಂಜೆ ಆಟದಲ್ಲಿ ಗೆಲ್ಲಬೇಕೆಂಬ ಆಸೆ ಅವರಲ್ಲಿತ್ತು. ಅವರು ಕೇಳಿದರು 'ನೀನು ಗೆಲ್ಲುವ ಸಾಧ್ಯತೆ ಚೆನ್ನಾಗಿದೆ ಎಂದು ಭಾವಿಸುತ್ತೀಯಾ?'

'ನನಗೆ ಅಷ್ಟು ನಂಬಿಕೆಯಿಲ್ಲ, ಅಪ್ಪಾ, ಹಿಂದಿನ ರಾತ್ರಿ ನಾನು ನನ್ನ ಮೊದಲನೆಯ ಮೊಟ್ಟೆಯನ್ನು ಕಳೆದುಕೊಂಡೆ'.

'ಹೇಗೆ ಗೆಲ್ಲಬೇಕೆಂದು ನಾನು ಹೇಳಲೇ?'

'ಹೇಗೆ ಅಪ್ಪಾ?'

'ನಾನು ಹುಡುಗನಾಗಿದ್ದಾಗ, ಈ ಆಟವನ್ನು ಆಡುತ್ತಿದ್ದೆ. ಹಳ್ಳಿಯಲ್ಲಿ ಹೆಚ್ಚು ಜನ ಸೇರಿದಾಗೆಲ್ಲಾ ನಾವು ನಮ್ಮ ಜೊತೆ ಕುದಿಸಿದ ಮೊಟ್ಟೆಯನ್ನು ತೆಗೆದುಕೊಂಡು ಹೋಗುತ್ತಿದ್ದೆವು. ಆ ಕಾಲದಲ್ಲಿ ಇದೊಂದು ತುಂಬಾ ವಿನೋದದ ಆಟವಾಗಿತ್ತು. ಏಕೆಂದರೆ ಬೇರೆ ಹಳ್ಳಿಯ ಹುಡುಗರ ಮೇಲೂ ಆಟವಾಡುತ್ತಿದ್ದೆವು. ಕೆಲವು



ವೇಳೆ ನಾನು ಒಂದು ಸಂಜೆಗೆ ಡಜನ್‌ಗಟ್ಟಲೆ ಮೊಟ್ಟೆಗಳನ್ನು ಗೆಲ್ಲುತ್ತಿದ್ದನು.

'ಅಪ್ಪಾ, ನಿನಗೆ ಏನೋ ಗುಟ್ಟು ಗೊತ್ತಿರಬೇಕು' ಜ್ಯಾಕ್ ಉತ್ಸಾಹದಿಂದ ಹೇಳಿದನು. 'ಅದೇನದು? ನನಗೆ ಹೇಳಿ'.

'ಗುಟ್ಟು ನೀನು ಮೊಟ್ಟೆಯನ್ನು ಕುದಿಸುವ ರೀತಿಯಲ್ಲಿದೆ. ನಿನ್ನ ಮೊಟ್ಟೆ ಗಟ್ಟಿಯಾಗಿ, ಪುಡಿಪುಡಿಯಾಗದಂತೆ ಇರಬೇಕೆಂದು ನೀನು ಇಷ್ಟಪಟ್ಟಲ್ಲಿ ನೀನು ಅದನ್ನು ತುಂಬಾ ಹೊತ್ತು ಕುದಿಸಬೇಕು. ನಿನಗೆ ಎಷ್ಟು ಸಾಧ್ಯವೋ ಅಷ್ಟು ಹೊತ್ತು ಅದನ್ನು ಕುದಿಸು, ಚಿಪ್ಪು ಕಲ್ಲಿನಂತೆ ಗಟ್ಟಿಯಾಗುತ್ತದೆ. ಆದರೆ, ಅದು ತಿನ್ನಲು ಚೆನ್ನಾಗಿರುವುದಿಲ್ಲ, ಆದರೆ ನೀನು ಅನೇಕ ಇತರ ಮೊಟ್ಟೆಗಳನ್ನು ಗೆಲ್ಲುವುದರಿಂದ ಈ ಬಗ್ಗೆ ತಲೆ ಕೆಡಿಸಿಕೊಳ್ಳಬೇಡ. ನನ್ನ ಸಲಹೆ ಪಾಲಿಸಿದರೆ ನೀನು ಈ ಸಂಜೆ ವಿಜೇತನಾಗುವೆ ಎಂದು ನಾನು ಪ್ರಮಾಣ ಮಾಡಿ ಹೇಳುತ್ತೇನೆ.'

ಆ ಸಂಜೆ ಜ್ಯಾಕ್ ತನ್ನ ಸ್ನೇಹಿತರನ್ನು ಮೊಟ್ಟೆಯ ಅಂಗಡಿಯಲ್ಲಿ ಸಂಧಿಸಿದನು. 'ಒಳ್ಳೆಯದು, ಈಗ, ಜೋರಮ್' 'ನಾನು ಮರು ಆಟಕ್ಕೆ ಸಿದ್ಧವಾಗಿದ್ದೇನೆ' ಎಂದ.

'ಖಂಡಿತ' ಜೋರಮ್ ಹೇಳಿದನು, 'ನೀನು ಅಷ್ಟು ಚುರುಕು ಎಂದು ತಿಳಿದುಕೊಂಡಿದ್ದರೆ ಖಂಡಿತ ಪ್ರಯತ್ನಿಸಬಹುದು. ನನ್ನ ಬಳಿ ಇಲ್ಲಿ, ಏನೋ ತುಂಬಾ ಚೆನ್ನಾಗಿರುವುದು ಇದೆ ಎಂಬುದರ ಬಗ್ಗೆ ನಿನಗೆ ಎಚ್ಚರಿಕೆ ಕೊಡುತ್ತೇನೆ.'



ಹೀಗೆ ಆಟ ಪ್ರಾರಂಭವಾಯಿತು. ಜ್ಯಾಕ್‌ನ ಮೊಟ್ಟೆ ಕೆಳಗಿತ್ತು. ಮತ್ತೆ 'ಠಕ್!'ಶಬ್ದ ಮಾಡಿತು. ಜ್ಯಾಕ್‌ನ ಮುಖ ಅರಳಿತು. ಏಕೆಂದರೆ ಈ ಸಲ ಅವನ ಮೊಟ್ಟೆ ಗೆದ್ದಿತ್ತು. ಜೋರಮ್ ಪೂರಾ ಸಪ್ಪಗಾಗಿ ಕಾಣಿಸಿದನು, ಏಕೆಂದರೆ ಅವನು ತಾನು ಗೆಲ್ಲುವೆನೆಂದು ತುಂಬಾ ಭರವಸೆ ಹೊಂದಿದ್ದನು.

'ಮುಂದೆ ಸ್ಪರ್ಧಿಸುವವರು ಯಾರು?' ಜ್ಯಾಕ್ ತನ್ನ ಸ್ನೇಹಿತರ ಕಡೆ ಸುತ್ತ ನೋಡುತ್ತಾ ಕೇಳಿದನು.

'ನಾನು' ಎಂದು ಮೊಟ್ಟೆಯನ್ನು ಜೇಬಿನಿಂದ ತೆಗೆಯುತ್ತಾ ಕೂನ್ ಹೇಳಿದನು.

ಮತ್ತೊಮ್ಮೆ ಜ್ಯಾಕ್‌ನ ಮೊಟ್ಟೆ ತಳದಲ್ಲಿತ್ತು, ಮತ್ತೆ ಪುನಃ ಜ್ಯಾಕ್ ಗೆದ್ದನು. ಅವನು ತನ್ನ ಹಳ್ಳಿಯ ಇತರ ಸ್ನೇಹಿತರೊಡನೆ ಆಡುತ್ತಾ ಅನೇಕ ಮೊಟ್ಟೆಗಳನ್ನು ಗೆಲ್ಲುತ್ತಾ ಹೋದನು. ಕೊನೆಗೆ ಬೇರೆ ಹಳ್ಳಿಯ ಯಾರೊಡನಾದರೂ ಸ್ಪರ್ಧಿಸಬೇಕೆಂದು ಧೈರ್ಯವಾಗಿ ನಿಶ್ಚಯಿಸಿದನು.

'ಏನಣ್ಣಾ, ನನ್ನೊಡನೆ ಆಡುವೆಯಾ?' ಅವನು ಹತ್ತಿರದ ಹಳ್ಳಿಯಿಂದ ಬಂದ

ಒಬ್ಬ ದೊಡ್ಡ ಹುಡುಗನನ್ನು ಕೇಳಿದನು. ಆ ಹುಡುಗ ಸ್ನೇಹಿತರೊಡನೆ ಇಡೀ ಸಂಜೆ ಆಡುತ್ತಾ ಗೆಲ್ಲುತ್ತಾ ಇದ್ದನು. ನಿಜವಾಗಿಯೂ ಅವನು ಒಬ್ಬ ಭಾರೀ ನಿಪುಣತೆಯ ಕೈಚಳಕವುಳ್ಳ ಆಟಗಾರನಾಗಿದ್ದನು. ಜ್ಯೂಕ್‌ನ ಮೊಟ್ಟೆಯನ್ನು ತೆಗೆದುಕೊಂಡು ಅವನ ಕೈನಲ್ಲಿ ಕೊಡುತ್ತಾ 'ಚೆನ್ನಾಗಿದೆ' ಎಂದು ಅವನು ಹೇಳಿದನು. ಆಮೇಲೆ ಅವನು, 'ಒಳ್ಳೆಯದು ಇದು ಸಾಕಷ್ಟು ತೂಕವಾಗಿದೆ. ಆದರೆ ನನ್ನದು ಇನ್ನೂ ಗಟ್ಟಿಯಾಗಿದೆ' ಎಂದನು.

'ನನ್ನ ಮೊಟ್ಟೆ ಮೇಲಿರಲಿ; ದಯವಿಟ್ಟು ಅಣ್ಣಾ'.

ಅವನು ತನ್ನ ಮೊಟ್ಟೆಯನ್ನು ಹೊರಗೆ ಹಿಡಿದುಕೊಂಡು, 'ಹಾಗೇ ಆಗಲಿ' ಎಂದನು.

ಜ್ಯೂಕ್ ಕಾಲ ಕಳೆಯಲಿಲ್ಲ. ಅವನ ಮೊಟ್ಟೆ ಕೆಳಗೆ ಬಂತು, ಒಂದು ಅಸಾಮಾನ್ಯವಾದ "ಠಕ್" ಎಂಬ ಶಬ್ದವಾಯಿತು. ಅವನ ಮೊಟ್ಟೆ ಒಡೆದದ್ದನ್ನು ನೋಡಿದಾಗ ಜ್ಯೂಕ್ ಮತ್ತು ಅವನ ಸ್ನೇಹಿತರುಗಳ ಮುಖಗಳು ಇಳಿದು ಹೋದವು.

ಆ ಹಿರಿಯ ಹುಡುಗನ ಮೊಟ್ಟೆ ಕೂಡಾ ಒಡೆದಿತ್ತು. ಆದ್ದರಿಂದ ಆಟ ಸಮವಾಯಿತು. ಮತ್ತೆ ಯಾವ ಹುಡುಗನೂ ತನ್ನ ಮೊಟ್ಟೆಯನ್ನು ಕಳೆದುಕೊಳ್ಳಲಿಲ್ಲ.

ಹಿರಿಯ ಹುಡುಗ ನಕ್ಕು ಜ್ಯೂಕ್‌ನ ಭುಜ ತಟ್ಟಿ ಕೇಳಿದನು, 'ಈ ಸಂಜೆ ನಾವಿಬ್ಬರೂ ವಿಜೇತರು ಮತ್ತೆ ನೀನು ನನ್ನಷ್ಟೇ ಆಟದಲ್ಲಿ ನಿಪುಣ. ಆದರೆ ನೀನು ನನ್ನ ಮೊಟ್ಟೆಯನ್ನು ತೆಗೆದುಕೊ, ಏಕೆಂದರೆ, ಉತ್ತಮವಾಗಿ ಮೊಟ್ಟೆ ಒಡೆಯುವುದರಲ್ಲಿ ನೀನೂ ಒಬ್ಬ'.

ಜ್ಯೂಕ್‌ಗೆ ಹೆಮ್ಮೆ ಎನಿಸಿತು. ಸ್ನೇಹಿತರೊಡನೆ ಹೊಟೆಲಿಗೆ ಹೋಗಿ ತನ್ನಲ್ಲಿದ್ದ ಎಲ್ಲ ಮೊಟ್ಟೆಗಳನ್ನೂ ಅವರೊಡನೆ ಹಂಚಿಕೊಂಡು ತಿಂದನು. ಪ್ರತಿಯೊಬ್ಬರೂ ಜ್ಯೂಕ್‌ನನ್ನು ಅದರ ಗುಟ್ಟು ಏನೆಂದು ಕೇಳಲಾರಂಭಿಸಿದರು. ಆದರೆ ಸುಮ್ಮನೆ ತನ್ನ ತಲೆಯನ್ನು ಅಲ್ಲಾಡಿಸಿದನು.

ಸಂತೋಷದಿಂದ ಅವನು ಮನೆಗೆ ಹೋದ. "ಅಪ್ಪನ ಯಕ್ಷಿಣಿ ನಿಜಕ್ಕೂ ಕೆಲಸ ಮಾಡುತ್ತೆ" ಎಂದು ಮಲಗಿದ್ದಾಗಲೂ ಮೊಟ್ಟೆಯೊಡೆಯುವ ಆಟದ ಕನಸು ಕಾಣುತ್ತಿದ್ದ. ಮುಂದಿನ ದಿನಗಳ ಈ ಆಟದ ಬಗ್ಗೆ ಯೋಜನೆಗಳನ್ನು ಹಾಕಿಕೊಳ್ಳತೊಡಗಿದ. ಅಪ್ಪನ ದೆಸೆಯಿಂದ ತಾನು ಮೊಟ್ಟೆಯೊಡೆಯುವ ಧೀರನಾಗುವೆನೆಂಬ ದೃಢ ವಿಶ್ವಾಸ ಅವನಲ್ಲಿ ಮೂಡಿತು.

ಚಿತ್ರಗಳು: ಸುರಾಸಕ್ ದಸ್‌ಡಿಂಥಾರ್ನ್

# ಲೇಖಕರು ಮತ್ತು ಚಿತ್ರ ಕಲಾವಿದರು

## ಆಫ್ಘಾನಿಸ್ತಾನ

ಅಹಜಮ್ ರಹ್ನಾವರ್ಡ್ ಜರ್‍ಯಬ್ (Ahazam Rahnaward Zaryab) ಅವರು ಆಫ್ಘಾನಿಸ್ತಾನದ ಲೇಖಕರುಗಳಲ್ಲಿ ತುಂಬಾ ಪ್ರಸಿದ್ಧರಾದವರು. ಇವರು ವಾರ್ತಾ ಮತ್ತು ಸಂಸ್ಕೃತಿ ಸಚಿವಾಲಯದ ಸಂಸ್ಕೃತಿ ಇಲಾಖೆಯ ಅಧ್ಯಕ್ಷರೂ ಆಗಿರುತ್ತಾರೆ.

ಹಶೀಮ್ ಘೋರ್‌ಬಂಡಿ (Hashim Gorbandi) ಒಬ್ಬ ಸುಪ್ರಸಿದ್ಧ ಚಿತ್ರಕಾರ.

## ಬರ್ಮಾ

ಗಯೇತ್ನೀ ಯು ಯೆ ಮಿಂತ್ (Gayetni U ye Myint) ಅವರು ಅನೇಕ ಲೇಖನಗಳು, ಕತೆಗಳು ಮತ್ತು ಕಾದಂಬರಿಗಳನ್ನು ಪ್ರಕಟಿಸಿರುತ್ತಾರೆ. ಈಗ ಇವರು ವಾರ್ತಾ ಸಚಿವಾಲಯದೊಡನೆ ಸಂಪರ್ಕ ಹೊಂದಿರುತ್ತಾರೆ.

ಯೂ ಸೈನ್ (U Scin) ರ ಕೃತಿಗಳು ಅನೇಕ ಪ್ರಕಾಶನಗಳಲ್ಲಿ ಬೆಳಕು ಕಂಡಿವೆ. ಅವರು ಮುಖ್ಯವಾಗಿ ಯೂರೋಪಿನಲ್ಲಿ ವ್ಯಾಸಂಗ ಮಾಡಿದ್ದಾರೆ.

## ಭಾರತ

ವಳ್ಳಿ ಕಣ್ಣನ್ (Valli Kannan) ಒಬ್ಬ ಹವ್ಯಾಸಿ ಬರಹಗಾರ್ತಿ. ಇವರು ರಷ್ಯನ್ ಸಾಹಿತ್ಯವನ್ನು ತಮಿಳಿಗೆ ಅನುವಾದಿಸಿದ್ದಾರೆ.

ಆರ್. ಕೆ. ಲಕ್ಷ್ಮಣ್ ಅವರ ರಾಜಕೀಯ ವ್ಯಂಗ್ಯ ಚಿತ್ರಗಳು 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಮೂವತ್ತು ವರ್ಷಗಳಿಂದಲೂ ಪ್ರಕಟವಾಗುತ್ತಿವೆ.

## ಇಂಡೋನೇಷಿಯಾ

ಜುಸ್ರಾನ್ ಸಫಾನೋ (Jusran Safano)ವಿನ ಪ್ರವೃತ್ತಿಗಳು ಪತ್ರಿಕೋದ್ಯಮ, ಅರಣ್ಯಶಾಸ್ತ್ರ ಮತ್ತು ಚಲನಚಿತ್ರ ತಯಾರಿಕೆಗಳನ್ನೆಲ್ಲ ಒಳಗೊಂಡಿವೆ. ಅವರು ಅನೇಕ ಕಾದಂಬರಿಗಳನ್ನು ಬರೆದಿರುತ್ತಾರೆ.

ಓಸ್‌ಮನ್ ಎಫೆಂಡಿ (Oesman Effendi)ಅವರ ಕೃತಿಗಳು ಇಡೀ ವಿಶ್ವದಲ್ಲೇ ಪ್ರದರ್ಶಿತವಾಗಿವೆ.

## ಇರಾನ್

ಸೈರಸ್ ತಹ್‌ಬಾಜ್ (Cyrus Tahbaz) ಅವರು ಇರಾನಿನ ನವ್ಯ ಸಾಹಿತ್ಯ ಪ್ರಕಟಣೆಯಲ್ಲಿ ಬಹಳ ಕಾಲ ಶ್ರಮಿಸಿದವರು. ಪ್ರಸ್ತುತ ಇವರೊಬ್ಬ ಸಂಪಾದಕರು ಮತ್ತು ಮಕ್ಕಳ ಪುಸ್ತಕ ವಿನ್ಯಾಸಕಾರರು.

ನಿಕ್‌ಜದ್ ನೊಜೌಮಿ (Nikzad Nojoumi)ಅವರ ಚಿತ್ರಗಳನ್ನು ಅನೇಕ ಬಗೆಯ ಮಕ್ಕಳ ಪುಸ್ತಕಗಳಿಗೆ ಉಪಯೋಗಿಸಿಕೊಳ್ಳಲಾಗಿದೆ.

## ಜಪಾನ್

ನಾನ್‌ಕಿಚಿಕ್ ನಿಮಿ (Nankichik Nimi) ಅವರು 1942ರಲ್ಲಿ ದಿವಂಗತರಾದರು, ಅವರ ಮಕ್ಕಳ ಪದ್ಯಗಳು ಮತ್ತು ಕಥೆಗಳು ಮರಣೋತ್ತರವಾಗಿ ತುಂಬಾ ಪ್ರಸಿದ್ಧಿ ಗಳಿಸಿವೆ.

ಟೈಕಿಚಿ ಮಿಯೋಷಿ (Teikichi Miyoshi)ಅವರ ಚಿತ್ರಗಳು ಜಪಾನೀ ಹಾಗೂ ವಿದೇಶೀ ಭಾಷಾ ಪುಸ್ತಕಗಳಲ್ಲಿ ಕಂಡುಬಂದಿವೆ.

## ಕೊರಿಯ

ಒ ಯಾಂಗ್ ಸೂ (O Yong su)ಅವರು ಒಬ್ಬ ಪ್ರಶಸ್ತಿ ವಿಜೇತ ಲೇಖಕ. ಈಗ ಅವರು ಒಂದು ಸಾಹಿತ್ಯಿಕ ಪತ್ರಿಕೆಯ ಸಂಪಾದಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಕಿಮ್ ಯೊಂಗ್-ಜೂ (Kim Yong-ju) ಒಬ್ಬ ಪಾಶ್ಚಿಮಾತ್ಯ ಶೈಲಿಯ ಚಿತ್ರಕಾರ. ಅವರ ಕೃತಿಗಳು ವ್ಯಾಪಕವಾಗಿ ಪ್ರದರ್ಶಿಸಲ್ಪಟ್ಟಿವೆ.

## ಮಲೇಷಿಯಾ

ಇಸ್ಮಾಯಿಲ್ ಅಹಮದ್ (Ismail Ahmad) ಅವರು ಒಬ್ಬ ಉಪಾಧ್ಯಾಯರು ಹಾಗೂ ಸಂಶೋಧಕರಾಗಿ ಕೆಲಸ ಮಾಡುತ್ತಿದ್ದಾರೆ. ಜೊತೆಗೆ, ಮಕ್ಕಳ ಪುಸ್ತಕಗಳು ಮತ್ತು ಪುಸ್ತಕ ವಿಮರ್ಶೆಗಳನ್ನು ಬರೆದಿದ್ದಾರೆ.

ಒಥ್‌ಮನ್ ಬಿನ್ ಹಾಜಿ ಜೈನುದ್ದೀನ್ (Othman bin Haji Zainudin) ಒಬ್ಬ ಪುಸ್ತಕ ವಿನ್ಯಾಸಕಾರ ಮತ್ತು ಚಿತ್ರಕಾರ.

## ನೇಪಾಳ

ಮಾಧವ್ ಘಿಮೈರ್ (Madhav Ghimire) ಅವರು ನೇಪಾಳೀ ಸಾಹಿತ್ಯವನ್ನು ಬೆಳೆಸಲು ಧೀರ್ಘವಾಗಿ ಶ್ರಮಿಸಿದ್ದಾರೆ.

ಟೇಕ್ ಬೀರ್ ಮುಖಿಯಾ (Tek Bir Mukhiya) ಅವರು ಸ್ವಕಲಿಕೆಯ ಚಿತ್ರಕಾರ ಮತ್ತು ನೇಪಾಳದ ಲಲಿತಕಲಾ ಸಂಘದ ಮುಖ್ಯ ಚಿತ್ರಕಾರರು.

## ಪಾಕೀಸ್ತಾನ

ಪ್ರಸಿದ್ಧ ಲೇಖಕರಾದ ಅನ್ವರ್ ಇನಾಯತುಲ್ಲಾ (Anwar Enayetullah) ಅವರು ಉರ್ದು ಮತ್ತು ಇಂಗ್ಲಿಷ್ ಎರಡರಲ್ಲೂ ಬರೆಯುತ್ತಾರೆ.

ಮೊಹಮ್ಮದ್ ವಾಸಿಮ್ (Mohammad Wasim) ಅವರು ಒಬ್ಬ ಚಿತ್ರಕಾರರು ಹಾಗೂ ವ್ಯಂಗ್ಯಚಿತ್ರಕಾರರು.

## ಫಿಲಿಪೈನ್ಸ್

ಎನ್. ವಿ. ಎಮ್. ಗೊಂಜಾಲೆಸ್ (N.V.M Gonzales) ಅವರು ಫಿಲಿಪೈನ್ಸ್ ವಿಶ್ವವಿದ್ಯಾಲಯದ ಇಂಗ್ಲಿಷ್ ಹಾಗೂ ತುಲನಾತ್ಮಕ ಸಾಹಿತ್ಯದ ಸಹ ಪ್ರಾಧ್ಯಾಪಕರು.

ಎಡ್ಗರ್ ಸೊಲ್ಲರ್ (Edgar Soller) ಫಿಲಿಪೈನ್ಸ್‌ನ ಪ್ರಖ್ಯಾತ ಚಿತ್ರಕಾರರುಗಳಲ್ಲಿ ಒಬ್ಬರು.

## ಸಿಂಗಪುರ್

ವೈಲೆಟ್ ವಿಲ್‌ಕಿನ್ಸ್ (Violet Wilkins) ಉಪಾಧ್ಯಾಯರು ಮತ್ತು ಹೆಸರಾಂತ ಮಕ್ಕಳ ಕಥೆಗಳ ಪ್ರಖ್ಯಾತ ಲೇಖಕರು.

ಚಿನ್ ಆಯ್ ಟೋ (Chin oi Tow) ಅವರು ಒಬ್ಬ ಪ್ರಖ್ಯಾತ ಚಿತ್ರಕಾರರು ಮತ್ತು ಪುಸ್ತಕ ವಿನ್ಯಾಸಕಾರರು.

## ಶ್ರೀಲಂಕಾ

ಸಿಬಿಲ್ ವೆಟ್ಟಾಸಿಂಘೆ (Sybil Wettasinghe) ಅವರು ಒಬ್ಬ ಪತ್ರಕರ್ತರು ಮತ್ತು ಪ್ರಶಸ್ತಿ ವಿಜೇತ ಮಕ್ಕಳ ಕಥೆಗಾರರು ಹಾಗೂ ಬಾಟಿಕ್ ಕಲೆಯಲ್ಲಿ ಪರಿಣತರು.

ಸೋಮಾಸಿರಿ ಹೆರತ್ (Somasiri Herath) ತಮ್ಮ ಕಲಾ ಕೃತಿಗಳನ್ನು ಅನೇಕ ಸಲ ಪ್ರದರ್ಶಿಸಿರುತ್ತಾರೆ. ಪ್ರಸ್ತುತ ಅವರು ಒಬ್ಬ ಕಾರ್ಯಪ್ರವೃತ್ತ ಪುಸ್ತಕ ವಿನ್ಯಾಸಕಾರರಾಗಿದ್ದಾರೆ.

## ಥೈಲ್ಯಾಂಡ್

ಮನೋಪ್ ಕ್ಯೂಸಾನಿತ್ (Manop Kaewsanit) ಅವರ ಮಕ್ಕಳು ಹಾಗೂ ಹಳ್ಳಿಗಾಡಿನ ಜೀವನ ಪ್ರೇಮ ಅವರ ಬರವಣಿಗೆಗಳಲ್ಲಿ ಕಂಡುಬಂದಿವೆ.

ಸುರಾಸಕ್ ಡಸ್‌ಡಿಂಥಾರ್ನ್ (Surasak Dusdinthorn) ಅವರ ಚಿತ್ರಗಳು ಅನೇಕ ಮಕ್ಕಳ ಪುಸ್ತಕಗಳಲ್ಲಿ ಕಂಡುಬಂದಿವೆ.

